# ಅಚಲ

ದ್ವೈಮಾಸಿಕ, ನವಂಬರ್ 8, 1993





ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

ಸಂಪುಟ : 9 ಸಂಚಿಕೆ : 5

''ಅಚಲ'' ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿಗಳನ್ನು ಎಂ. ಓ/ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚೆಕ್ ಮೂಲಕ ಹಣ ಕಳಿಸುವವರು 20/ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.



ಚಂದಾ ವಿವರ :

| | | |
|---|---|---|
| ವಾರ್ಷಿಕ ಚಂದಾ | : | ರೂ. 15.00 |
| ಆಜೀವ ಚಂದಾ | : | ರೂ. 150.00 |
| (ಚೆಕ್ ಮೂಲಕ | : | ರೂ. 160.00) |
| ಸಂಸ್ಥೆಗಳಿಗೆ | : | ರೂ. 200.00 |
| ಬಿಡಿ ಪ್ರತಿ | : | ರೂ. 2.00 |
| ವಿಶೇಷ ಪ್ರತಿ | : | ರೂ. 3.50 |

**Printed at Lipi Mudrana,**
**No. 1, Bugle Rock Road, Bangalore-4.**
**Published by, Dr. G. Ramakrishna on behalf of Jagruthi Mahila Adhyayana Kendra, 261, I Main Road, Vyalikaval, Bangalore-3**
**Editor : N. Gayathri**

**ಲೇಖನ, ಹಣ ಕಳುಹಿಸಬೇಕಾದ ವಿಳಾಸ :–**

ಎನ್. ಗಾಯತ್ರಿ
ಬಿ–30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್,
9ನೇ ಕ್ರಾಸ್, ಒಂದನೇ ಮೇನ್
ವಿಜಯನಗರ 2ನೇ ಹಂತ
ಬೆಂಗಳೂರು : 560 040

## ಕಂಬನಿ

ಕರ್ನಾಟಕ ಮತ್ತು ಮಹಾರಾಷ್ಟ್ರ ಪ್ರಾಂತ್ಯಗಳಲ್ಲಿ ನಡೆದ ಭೀಕರ ಭೂಕಂಪ ನಮ್ಮೆಲ್ಲರನ್ನೂ ನಡುಗಿಸಿದೆ. ಪ್ರಕೃತಿಯ ವಿಕೋಪದಿಂದ ಸಾವಿಗೀಡಾದ ಮೂವತ್ತು ಸಾವಿರಕ್ಕೂ ಹೆಚ್ಚು ಜನರನ್ನು ಕಳೆದುಕೊಂಡ ಬಂಧು ಬಾಂಧವರ ಶೋಕ ಯಾರ ಊಹೆಗೂ ನಿಲುಕದ್ದು. ಆತ್ಮೀಯರನ್ನು ಕಳೆದುಕೊಂಡ ದುಃಖದ ಜೊತೆಗೆ ಇಂದು ನಿರ್ವಸಿತರಾಗಿ ಬೀದಿಗೆ ಎಸೆಯಲ್ಪಟ್ಟ ನಿರ್ಭಾಗ್ಯರ ದುಃಖಕ್ಕೆ ಅಚಲ ಕಂಬನಿ ಮಿಡಿಯುತ್ತದೆ.

ಈ ಸಂದರ್ಭದಲ್ಲಿ ಭೂಕಂಪ ಸಂತ್ರಸ್ತರಿಗಾಗಿ ಧನ, ವಸ್ತ್ರ, ಪಾತ್ರೆಗಳನ್ನು ಸಂಗ್ರಹಿಸಿ ಸಹಕರಿಸಿದ ನಮ್ಮ ಎಲ್ಲಾ ಸದಸ್ಯರಿಗೂ ಅಚಲ ವಂದನೆಗಳನ್ನು ತಿಳಿಸುತ್ತದೆ.

## ಅಭಿನಂದನೆ

ಕನ್ನಡದ ಪ್ರಥಮ ಹಾಸ್ಯ ಲೇಖಕಿ ಶ್ರೀಮತಿ ಟಿ. ಸುನಂದಮ್ಮನವರು ಕಳೆದ ಅರ್ಧ ಶತಕಗಳಿಂದ ತಮ್ಮ ಬರಹಗಳ ಮೂಲಕ ಹಾಸ್ಯ ಸಾಹಿತ್ಯ ಪ್ರಕಾರವನ್ನು ಶ್ರೀಮಂತಗೊಳಿಸಿದ್ದಾರೆ. ಅವರ ನಗೆಬರೆಹಗಳ ಸಮಗ್ರ ಸಾಹಿತ್ಯ ಕೃತಿ ಇತ್ತೀಚೆಗೆ ಬೆಂಗಳೂರಿನಲ್ಲಿ ಕರ್ನಾಟಕ ಲೇಖಕಿಯರ ಸಂಘವು ಏರ್ಪಡಿಸಿದ್ದ ಕಾರ್ಯಕ್ರಮವೊಂದರಲ್ಲಿ ಬಿಡುಗಡೆಯಾಯಿತು. ಇದು ಕನ್ನಡ ಲೇಖಕಿಯೊಬ್ಬರ ಪ್ರಪ್ರಥಮ ಸಮಗ್ರ ಸಾಹಿತ್ಯ ಕೃತಿಯೂ ಹೌದು. ಈ ಸಂದರ್ಭದಲ್ಲಿ ಅಚಲ ಶ್ರೀಮತಿ ಟಿ. ಸುನಂದಮ್ಮನವರನ್ನು ಅಭಿನಂದಿಸುತ್ತದೆ.

— ಸಂಪಾದಕರು

## ಸಂಪಾದಕೀಯ

# ಖಂಡನಾರ್ಹ ತೀರ್ಪು

ಹಾಸನದಲ್ಲಿ 15 ವರ್ಷಗಳ ಹಿಂದೆ ನಡೆದ ಯುವತಿಯೊಬ್ಬಳ ಅತ್ಯಾಚಾರ ಪ್ರಕರಣಕ್ಕೆ ಸಂಬಂಧಿಸಿದಂತೆ ಇಬ್ಬರು ಆರೋಪಿಗಳಿಗೆ ಕರ್ನಾಟಕ ಹೈಕೋರ್ಟ್ ವಿಧಿಸಿದ್ದ ಜೈಲು ಶಿಕ್ಷೆಯ ಅವಧಿಯನ್ನು ಇಳಿಸಿರುವ ಸುಪ್ರೀಂ ಕೋರ್ಟ್‌ನ ತೀರ್ಪನ್ನು ಅತ್ಯುಗ್ರ ಶಬ್ದಗಳಲ್ಲಿ ಖಂಡಿಸಬೇಕಾಗಿದೆ. ಈ ತೀರ್ಪು ಈಗ ಎಲ್ಲೆಡೆ ಪ್ರತಿಭಟನೆಗೆ ಎಡೆ ಮಾಡಿದೆ.

ರಾಜು ಮತ್ತು ಕೃಷ್ಣ ಎಂಬ ಯುವಕರಿಗೆ ಕರ್ನಾಟಕದ ಹೈಕೋರ್ಟ್ ಏಳು ವರ್ಷಗಳ ಕಠಿಣ ಶಿಕ್ಷೆ ವಿಧಿಸಿತು. ಆದರೆ ಈಗ ಸುಪ್ರೀಂಕೋರ್ಟ್ ಈ ಅಪರಾಧಿಗಳ ಶಿಕ್ಷೆಯ ಅವಧಿಯನ್ನು ಮೂರು ವರ್ಷಗಳಿಗೆ ಇಳಿಸಿ ಅತ್ಯಾಚಾರ ದಂಥ ಪೈಶಾಚಿಕ ಕೃತ್ಯ ಎಸಗಿದ ಅಪರಾಧಗಳ ಬಗೆಗೆ 'ಸಹಾನುಭೂತಿ' ವ್ಯಕ್ತಪಡಿಸಿದೆ. ಆದರೆ ಅತ್ಯಾಚಾರಿಗಳ ನೀಚತನಕ್ಕೆ ಬಲಿಯಾದ ಮಹಿಳೆ ಬಗೆಗೆ ಚಕಾರವೆತ್ತಿಲ್ಲ.

ನರ್ಸ್ ಆಗಿ ಕೆಲಸ ಮಾಡುತ್ತಿದ್ದ 21ರ ಪ್ರಾಯದ ಈ ಮಹಿಳೆಯು ಹೊಸಕೋಟೆಯಿಂದ ಸಕಲೇಶಪುರಕ್ಕೆ ತನ್ನ ಸಹೋದರನ ಮದುವೆಗೆಂದು ಹೋಗುತ್ತಿದ್ದಳು. ಬೆಂಗಳೂರಿನಲ್ಲಿ ಸಕಲೇಶಪುರಕ್ಕೆ ಹೋಗಲು ಹಾಸನದ ಬಸ್ ಹತ್ತಿದಳು. ರಾಜು ಮತ್ತು ಕೃಷ್ಣ ಅವಳ ಜೊತೆ ನಯವಾಗಿ ಮಾತನಾಡಿ ಸ್ನೇಹಿತರಂತೆ ವರ್ತಿಸಿದರು. ಆಕೆ ಹಾಸನದಲ್ಲಿ ರಾತ್ರಿ ತಂಗಿ ಮರುದಿನ ಸಕಲೇಶಪುರ ಹಾದಿ ಹಿಡಿಯುವಂತೆ ಪುಸಲಾಯಿಸಿದರು. ಹಾಸನದಲ್ಲಿ ಹೊಟೇಲ್‌ನಲ್ಲಿ ತಂಗಿದ್ದಾಗ ಇಬ್ಬರೂ ಅವಳ ಮೇಲೆ ಅತ್ಯಾಚಾರ ಎಸಗಿದರು. ಚಾಕು ತೋರಿಸಿ ಬೆದರಿಕೆ ಒಡ್ಡಲಾಯಿತು. ಆದರೂ ಆಕೆ ಕಿರುಚಿದಾಗ ಹೋಟೆಲ್ ಸಿಬ್ಬಂದಿ ಅವಳನ್ನು ರಕ್ಷಿಸಿತು. ಆರೋಪಿಗಳನ್ನು ಅವರು ಪೋಲೀಸರಿಗೆ ಒಪ್ಪಿಸಿದರು. ಅದು ನಡೆದದ್ದು 1978ರಲ್ಲಿ. ಆಗ ಈ ರಾಜುಗೆ 24 ಮತ್ತು ಕೃಷ್ಣನಿಗೆ 21 ವರ್ಷ ವಯಸ್ಸು. 1980ರಲ್ಲಿ ಹಾಸನ ಸೆಷನ್ಸ್ ನ್ಯಾಯಾಲಯವು ಕೃಷ್ಣನನ್ನು ಬಿಡುಗಡೆ ಮಾಡಿತು. ಆದರೆ ರಾಜುಗೆ ಶಿಕ್ಷೆ ವಿಧಿಸಿತು. ಕರ್ನಾಟಕ ಹೈಕೋರ್ಟ್ 1982ರಲ್ಲಿ ತೀರ್ಪು ನೀಡಿ ಅತ್ಯಾಚಾರ ಪ್ರಕರಣದಲ್ಲಿ ಇಬ್ಬರು ಆರೋಪಿಗಳೂ ಪಾಲ್ಗೊಂಡಿದ್ದಾರೆಂಬುದು ಸ್ಪಷ್ಟವಾಗಿದ್ದು ಅವರಿಗೆ ಏಳು ವರ್ಷಗಳ ಕಠಿಣ ಶಿಕ್ಷೆ ವಿಧಿಸಿತು. ಈ ತೀರ್ಪಿನ ವಿರುದ್ಧ ಸುಪ್ರೀಂಕೋರ್ಟಿಗೆ ರಾಜು, ಕೃಷ್ಣ ಮೇಲ್ಮನವಿ ಸಲ್ಲಿಸಿದಾಗ ಇದೀಗ ಸರ್ವೋಚ್ಚ ನ್ಯಾಯಾಲಯವು ಏಳು ವರ್ಷಗಳ ಶಿಕ್ಷೆಯನ್ನು ಮೂರು ವರ್ಷಕ್ಕೆ ಇಳಿಸಿ ಉದಾರ ಮನೋಭಾವ ತೋರಿದೆ.

ಶಿಕ್ಷೆಯ ಅವಧಿಯನ್ನು ಕಡಿಮೆ ಮಾಡಲು ನ್ಯಾಯಾಲಯವು ನೀಡಿರುವ ಕಾರಣಗಳು ಎಳ್ಳಷ್ಟೂ ಸಮರ್ಥನೀಯವಾಗಿಲ್ಲ. ಮೊದಲನೆಯದಾಗಿ ಅತ್ಯಾಚಾರಿಗಳು ತೀರಾ ಸಣ್ಣ ಪ್ರಾಯದವರೆಂದು ಹೇಳಲಾಗಿದೆ. ಆದರೆ ಯುವಕರ ಪ್ರಾಯ ಘಟನೆ ನಡೆದಾಗ 24 ಮತ್ತು 21. ತಾವು ಮಾಡಿದ ಅಪರಾಧಕ್ಕೆ ಸಹಾನುಭೂತಿ ಅಥವಾ ಅಪ್ರಾಪ್ತರ ಮುಗ್ಧತೆಯ ಪರಿಣಾಮ ಎಂಬ ಲಾಭ ಪಡೆಯುವ ವಯಸ್ಸಂತೂ ಅದಲ್ಲ. ಕೋರ್ಟ್ ತೀರ್ಪಿನಲ್ಲಿ ವ್ಯಕ್ತವಾಗಿರುವ ಇನ್ನೊಂದು ಕಾರಣ ಯುವಕರು 'ಕಾಮಾಸಕ್ತಿಗೆ ಬಲಿಯಾದರು', ಎಂದು. ಅತ್ಯಾಚಾರಿಗಳು ಕಾಮೋದ್ರೇಕಕ್ಕೆ ಬಲಿಯಾಗುವವರು ನಿಜ. ಆದರೆ ಕಾನೂನು ಯಾರ ನೆರವಿಗೆ ಬರಬೇಕು? ಕಾಮೋದ್ರೇಕದಿಂದ ಏನು ಮಾಡುತ್ತಿದ್ದೇವೆಂಬ ಅರಿವಿಲ್ಲದಿರುವವರ ಪರವಾಗಿಯೋ ಅಥವಾ ಈ ಲೈಂಗಿಕ ಭಾವೋದ್ರೇಕದಿಂದ ಉಂಟಾಗುವ ಅಪರಾಧಕ್ಕೆ ಬಲಿಯಾಗುವ ಮಹಿಳೆ ಪರವಾಗಿಯೋ? ಕೋರ್ಟ್ ನೀಡಿರುವ ಮತ್ತೊಂದು ಕಾರಣ ಕೂಡ ಸಮರ್ಥನೀಯವಾಗಿಲ್ಲ. ಈ ಯುವಕರು ಇಷ್ಟು ವರ್ಷ ಅಗೌರವ ಮತ್ತು ಮಾನಸಿಕ ಯಾತನೆ ಅನುಭವಿಸಿದ್ದಾರೆ. ಅವರ ಶಿಕ್ಷೆ ಅವಧಿ ಕಡಿಮೆ ಮಾಡುವ ನಿರ್ಧಾರ ಈ ದೃಷ್ಟಿಯಲ್ಲಿ ಸಮರ್ಥನೀಯ. ಹಾಗಾದರೆ ಈ ಮಹಿಳೆಯು ಇಷ್ಟು ವರ್ಷಗಳಿಂದ

ಅನುಭವಿಸುತ್ತಿರುವ ಅವಮಾನ, ಯಾತನೆಗೆಲ್ಲ ಅರ್ಥವೇ ಇಲ್ಲವೇ? ಯುವಕರ ಮಾನಸಿಕ ಹಿಂಸೆಗಿಂತ ಆಕೆ ಅನುಭವಿಸಿರುವ ಮಾನಸಿಕ ಯಾತನೆ ವರ್ಣನಾತೀತವೆಂಬುದನ್ನು ಯಾರೂ ಒಪ್ಪುತ್ತಾರೆ. ಈ ಪುರುಷರ ಜತೆ ಕೋಣೆಯಲ್ಲಿರಲು ಆ ಮಹಿಳೆ ಒಪ್ಪಿದ್ದೇ ಅಪರಾಧದ ತೀವ್ರತೆಯನ್ನು ಕಡಿಮೆಗೊಳಿಸುತ್ತದೆ ಎಂಬ ತೀರ್ಪಿನಲ್ಲಿರುವ ಅಭಿಪ್ರಾಯವು ಕಾನೂನನ್ನೇ ಅಪಹಾಸ್ಯ ಮಾಡಿದಂತಾಗಿದೆ.

ಈ ತೀರ್ಪನ್ನು ಮರುಪರಿಶೀಲನೆಗಾಗಿ ಸುಪ್ರೀಂಕೋರ್ಟಿನ ಪೂರ್ಣ ಪೀಠಕ್ಕೆ ಒಪ್ಪಿಸಬೇಕು, ಆಗಲೇ ಮಹಿಳೆಯರಿಗೆ 'ನ್ಯಾಯದ ಬಾಗಿಲು ಪೂರ್ಣವಾಗಿ ಮುಚ್ಚಿಲ್ಲ' ಎಂದು ನಂಬಿಕೆ ಬರುತ್ತದೆ. ಹಿಂದೆ ನ್ಯಾಯಾಲಯವು ಎರಡು ಪ್ರಕರಣಗಳಲ್ಲಿ ಅತ್ಯಾಚಾರ ಆರೋಪಿಗಳನ್ನು ಬಿಡುಗಡೆ ಮಾಡಿತ್ತು. ಆರೋಪಿಗಳು ಪೋಲೀಸರಾಗಿದ್ದರೂ ಅತ್ಯಾಚಾರಕ್ಕೆ ಬಲಿಯಾದ ಮಹಿಳೆಯರು 'ಪ್ರಶ್ನಾತೀತ' ಅಥವಾ 'ಸ್ವೇಚ್ಛಾಚಾರ'ದ ನಡತೆಯವರೆಂಬ ಕಾರಣ ನೀಡಿ ಆರೋಪಿಗಳನ್ನು ಬಿಡುಗಡೆ ಮಾಡಲಾಗಿತ್ತು. ಅತ್ಯಾಚಾರದಂಥ ಪ್ರಕರಣದಲ್ಲಿ ಅಪರಾಧವನ್ನು ಅದರದೇ ತೀವ್ರತೆಯಲ್ಲಿ ಪರಿಗಣಿಸಬಹುದು ಮತ್ತು ಕೆಲವು ಸಂದರ್ಭದಲ್ಲಿ ಅತ್ಯಾಚಾರಿಗಳಿಗೆ ಸಹಾನುಭೂತಿ ಕೂಡ ಸಿಗುತ್ತದೆಂಬ ಕೆಟ್ಟ ಸಲಹೆಯನ್ನು ಇಂಥ ತೀರ್ಪುಗಳು ನೀಡುತ್ತವೆ. ಆದರೆ ಅತ್ಯಾಚಾರವು ಅತ್ಯಾಚಾರವೇ. ಯಾರೇ ಮಾಡಲಿ, ಯಾರೇ ಅದಕ್ಕೆ ಬಲಿಯಾದವರಾಗಲಿ ಅಪರಾಧದ ತೀವ್ರತೆ ಒಂದೇ. ನ್ಯಾಯಾಲಯವು ಅಪರಾಧದ ತೀವ್ರತೆಯನ್ನು ಸರಳಗೊಳಿಸಲೆತ್ನಿಸಿದರೆ ಅದು ಲೈಂಗಿಕ ಪಕ್ಷಪಾತದ ಧೋರಣೆಯಾಗಿ ಬಿಡುತ್ತದೆಯಷ್ಟೆ. ಮಾಯಾ ತ್ಯಾಗಿ ಪ್ರಕರಣ ಯಾರಿಗೆ ಗೊತ್ತಿಲ್ಲ. ಆಗ ಸರ್ವೋಚ್ಚ ನ್ಯಾಯಾಲಯವು ಆರೋಪಿಗಳಿಗೆ ಮರಣದಂಡನೆ ವಿಧಿಸಿತ್ತು. ನ್ಯಾಯಾಂಗ ಮತ್ತು ಸಾಮಾಜಿಕ ಪ್ರಜ್ಞೆಗೆ ಬೇರೆ ಉದಾಹರಣೆ ಬೇಡವೆಂದು ಆಗ ಎಲ್ಲೆಡೆ ಸಾರಲಾಗಿತ್ತು. ಆದರೆ ಇಂದಿನ, ಹಾಸನ ಪ್ರಕರಣದ ತೀರ್ಪು ಚಕ್ರ ಹಿಂದಕ್ಕೆ ತಿರುಗಿದಂತಹ ಅಭಿಪ್ರಾಯ ಕೊಡುತ್ತದೆ.

ಸುಪ್ರೀಂಕೋರ್ಟಿನ ಈ ತೀರ್ಪು ಪುರುಷ ಪ್ರಧಾನದ್ದಾಗಿದೆ ಎಂದು ದೆಹಲಿಯಲ್ಲಿ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯು ಕೋರ್ಟ್ ಮುಂದೆ ಪ್ರತಿಭಟನಾ ಪ್ರದರ್ಶನ ನಡೆಸಿದೆ. ಬೆಂಗಳೂರಿನಲ್ಲಿ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಮತ್ತು ಜನವಾದಿ ಸಂಘಟನೆಗಳು ತೀರ್ಪನ್ನು ಖಂಡಿಸಿ ಮರುಪರಿಶೀಲನೆಗೆ ಒತ್ತಾಯಿಸಿವೆ. ಸಮಾನತೆಯಲ್ಲಿ ನಂಬಿಕೆಯಿಟ್ಟಿರುವ ಎಲ್ಲರೂ ಈ ಬಗ್ಗೆ ಒತ್ತಾಯಿಸುವುದು ಇಂದು ಅತ್ಯಂತ ತುರ್ತಿನ ಸಂಗತಿಯಾಗಿದೆ.

**–ಎನ್. ಗಾಯತ್ರಿದೇವಿ**

---

"ಮಹಿಳೆಗೆ ಸ್ವಾತಂತ್ರ್ಯ ದೊರೆಯಬೇಕಾದರೆ ವಿವಾಹ ಒಂದು ವೃತ್ತಿ ಎಂಬ ಭಾವನೆ ಮೊದಲು ಮರೆಯಬೇಕು. ಸ್ವಾತಂತ್ರ್ಯವು ಆರ್ಥಿಕ ಸ್ಥಿತಿಗಳ ಮೇಲೆ ಅವಲಂಬಿಸಿದೆ. ಮಹಿಳೆ ಆರ್ಥಿಕವಾಗಿ ಸ್ವತಂತ್ರಳಾಗದೆ ಹಾಗೂ ಸ್ವಯಂಗಳಿಕೆಯಲ್ಲಿ ತೊಡಗದಿದ್ದರೆ ಅವಳು ಗಂಡ ಅಥವಾ ಇನ್ನಾರ ಮೇಲೋ ಅವಲಂಬಿತಳಾಗಿರಬೇಕಾಗುತ್ತದೆ. ಪರಾವಲಂಬಿಗಳೆಂದಿಗೂ ಸ್ವತಂತ್ರರಲ್ಲ. ಸ್ತ್ರೀ ಪುರುಷರ ಸಂಬಂಧ ಪರಸ್ಪರ ಅವಲಂಬನೆ ಇಲ್ಲದಂತಹ ಸ್ವತಂತ್ರ ಹಾಗೂ ಸಂಗಾತಿಯಾಗಿರುವಂಥದ್ದು."

**–ಜವಹರಲಾಲ್ ನೆಹರು**

---

# ಮೇರಿ ಕ್ಯೂರಿ

–ನೇಮಿಚಂದ್ರ

(ವಿಜ್ಞಾನಕ್ಕೆ, ಮಾನವೀಯತೆಗೆ ದೇಶ ಕಾಲದ ಸರಹದ್ದಿಲ್ಲ. ಮೇರಿ ವಿಜ್ಞಾನ ಮಾನವೀಯತೆ, ಎರಡರ ಪ್ರತೀಕವಾಗಿದ್ದಾಳೆ. ಕಡು ಬಡತನದಲ್ಲಿ ದುಡಿದು ಕಲಿತು, ಪರತಂತ್ರ ದೇಶದ ಪ್ರತಿಕೂಲ ಪರಿಸ್ಥಿತಿಗಳನ್ನು ಮೀರಿ ಜಗತ್‌ಪ್ರಸಿದ್ಧ ವಿಜ್ಞಾನಿಯಾದಳು. ಇಂದಿಗೆ ಮೇರಿ ಕ್ಯೂರಿ ಹುಟ್ಟಿ 126 ವರ್ಷಗಳು. ನವೆಂಬರ್ 7, ಮೇರಿ ಕ್ಯೂರಿಯ ಜನ್ಮ ದಿನದ ಪ್ರಯುಕ್ತ ನೇಮಿಚಂದ್ರ ಅವರು ಬರೆದ 'ಮೇರಿ ಕ್ಯೂರಿ' ನಾಟಕದ ಹಸ್ತಪ್ರತಿಯಿಂದ ಕೆಳಗಿನ ಗೀತೆಯನ್ನು ಪ್ರಕಟಿಸುತ್ತಿದ್ದೇವೆ.)

ಪರಾಡಳಿತದ ಪದತಳದಲಿ ತುಳಿದ ನೆಲದ ಮಗಳು ಮೇರಿ
ಭೂಪಟದಲಿ ಅಳಿಸಿ ಹೋಗಿದ್ದ ಪೋಲೆಂಡಿನ ಮಹಾ ನಾರಿ

ಬೆಳಕಿನೊಂದು ಕಿರಣ ಈ ಮೇರಿ ಕ್ಯೂರಿ
ಕಾಲ ಹಾದಿ ಕೋಲ್ಮಿಂಚು ಈ ಮೇರಿ ಕ್ಯೂರಿ

ಬಡತನದ ಬಗಲಿನಲ್ಲೆ ದುಡಿದು ಕಲಿತಳೀಕೆ
ಸಿರಿತನವ ಸರಿಸಿ ಬದಿಗೆ ನೀಡಿದಳೆಲ್ಲ ಮನುಜ ಕುಲಕೆ

ಹೋರಾಟದ ವರ್ಷಗಳು, ನಾಲ್ಕು ಸಂವತ್ಸರಗಳು
ವೀರೋಚಿತ ವರ್ಷಗಳು, ನಾಲ್ಕು ಸಂವತ್ಸರಗಳು
ಮುಗಿಲಿಗೆ ತೆರೆದ ಮುರುಕು ಮರದ ಸೂರಿನಡಿಯಲಿ
ಮಳೆ ಹಿಮ ಚಳಿ ಬಿಸಿಲು ಗಾಳಿ ನುಗ್ಗಿ ಬಂದ ಸ್ಥಳದಲಿ
ಸಾಗಿತ್ತು ಹುಡುಕಾಟ.... ಕ್ಷಣ ನಿಲ್ಲದ ಹೋರಾಟ
ಸಾಗಿತ್ತು ಹೋರಾಟ.... ಹೊಸ ಲೋಹದ ಹುಡುಕಾಟ

ಸವಿಯಿತ್ತು ಶ್ರಮದಲ್ಲಿ, ಸಿಹಿಯಿತ್ತು ಬದುಕಿನಲಿ
ಖುಷಿ ಇತ್ತು ಎದೆಯಲ್ಲಿ, ಮಿಂಚು ಕಣ್ಣಿನಂಚಿನಲಿ
ಕೈ ಹಿಡಿದ ಪ್ರೀತಿಯಿತ್ತು, ಜೊತೆ ಕೊಟ್ಟ ಹೆಗಲಿತ್ತು
ಎರಡು ಮಿದುಲು, ನಾಲ್ಕು ಕೈ, ಕನಸಿನ ಬೆನ್ನತ್ತಿತ್ತು

ಬುದ್ಧಿಬಲಕೆ ಭುಜಬಲಕೆ, ಬಾಹುಬಲಕೆ ಆತ್ಮಬಲಕೆ
ಮಣಿಯಲಿತ್ತು ವಿಜ್ಞಾನ, ದಣಿಯದಿದ್ದ ನಾರಿಗೆ
ಒಡಪು ಒಡೆಯಲಿತ್ತು ಪ್ರಕೃತಿ, ವೀರೋಚಿತ ಯಾಗಕೆ

ಗಾಢ ದ್ರವವ ಕುದಿಸಿ ತಿರುವಿ ಸೋಸಿ ನಿಂತಳು
ಕಪ್ಪು ಕೊಳಕು ಅದುರಿನಲ್ಲಿ ಮುಳುಗಿ ನಿಂತಳು
ಕಡೆದು ಕಡೆದು ಸಮುದ್ರ ಮಥನ ಕಾದು ನಿಂತಳು

ವಿಕಿರಣದ ಹೊಸಶಾಖೆಯೊಂದು ಪಡೆಯಲಿತ್ತು ಹುಟ್ಟನು
ಪ್ರಕೃತಿಯು ಮಣಿಯಲಿತ್ತು ಬಿಟ್ಟುಕೊಟ್ಟು ಗುಟ್ಟನು

ವಿಜ್ಞಾನದ ಸರಹದ್ದು ಹಿಗ್ಗಲಿತ್ತು ದಿಗಂತಕೆ
ಅಣುಯುಗದ ಅರುಣೋದಯ ಕಾದಿತ್ತು ಈ ಕ್ಷಣಕೆ

ಮೊದಲ ಮಹಾ ಯುದ್ಧದಲ್ಲಿ
ರಣ ರಂಗಮಂಚ ಮಧ್ಯದಲ್ಲಿ
ತಾಯಿ ಮೇರಿ ಬಂದಳಿಲ್ಲಿ
ವಿಜ್ಞಾನವನ್ನೆ ಎಳೆತಂದಳಿಲ್ಲಿ

ಯೋಧರೆದೆಯ ಹೊಕ್ಕ ಗುಂಡು
ಸಾಲುಗಟ್ಟಿ ನಿಂತ ದಂಡು
ಹಗಲು ಇರುಳ ಮರೆತಳವಳು
ಹಸಿವು ನಿದಿರೆ ತೊರೆದಳವಳು

ನೋವ ಕರೆಗೆ ಕರಗಿ ಮರುಗಿ
ಕ್ಷ–ಕಿರಣ ಹಿಡಿದು ಬಂದ
ನೋವ ಸವರಲೆಂದು ನಿಂತ
ಬೆಳಕಿನೊಂದು ಸೊಡರು ಮೇರಿ
ಕತ್ತಲಲ್ಲಿ ಕಿರಣ ಬೀರಿ
ಬಂದಳಿಲ್ಲಿ ರಣಭೂಮಿಗೆ
ಎಳೆತಂದಳಿಲ್ಲಿ ವಿಜ್ಞಾನವನ್ನು ಜನ ಸೇವೆಗೆ

ನೋವು ಕೊಡುವ ಯುದ್ದದಲ್ಲಿ
ಸಾವ ಕರೆವ ಯುದ್ಧದಲ್ಲಿ
ರುಧಿರ ಹರಿವ ಯುದ್ಧದಲ್ಲಿ
ಎದೆಯ ಬಿರಿವ ಯುದ್ಧದಲ್ಲಿ
ಕೊಲುವ ಕಲವ ಕದನದಲ್ಲಿ
ಜೀವದಾಸೆ ಹಿಂದೆ ತೊರೆದು
ಬದುಕ ಉಳಿಸಲೆಂದು ಹರಿದು
ವಿಜ್ಞಾನವೆಂಬ ಅಸ್ತ್ರ ಹಿಡಿದು
ಸಾವಿನೆದುರು ನಿಂತು ಗೆಲಿದು
ಜೀವ ಕೊಟ್ಟ ಉಸಿರು ಕೊಟ್ಟ
ಇಳೆಗೆ ಇಳಿದ ಅಮೃತ ಬಿಂದು

ಬೆಳಕಿನೊಂದು ಕಿರಣ ಈ ಮೇರಿ ಕ್ಯೂರಿ
ಕಾಲ ಹಾದಿ ಕೊಲ್ಮಿಂಚು ಈ ಮೇರಿ ಕ್ಯೂರಿ

# ಸ್ಪಂದನ

## ಗಂಡನಿಗೆ 'ರೀ' ಹಾಕಬೇಕೆ?

**ಡಾ. ಸಂಜೀವ ಕುಲಕರ್ಣಿ**

ನಿಮಗೇನಾದರೂ ಗೊತ್ತಿದೆಯೇ ಹೆಂಡತಿ ಗಂಡನಿಗೆ 'ರೀ' ಯಾಕೆ ಹಾಕಬೇಕು ಎಂಬುದಕ್ಕೆ ಉತ್ತರ ? ಮೇಲ್ನೋಟಕ್ಕೆ ಇದೊಂದು ಬಹಳ ಸಣ್ಣ ವಿಷಯ. ಆಲೋಚನೆಮಾಡಿ ತಲೆಕೆಡಿಸಿಕೊಳ್ಳಬೇಕಾದಂತಹ ಮಹತ್ವದ ಸಂಗತಿಯೇ ಅಲ್ಲ ಎಂದು ಅನ್ನಿಸಬಹುದು. ಆದರೆ ಸ್ವಲ್ಪ ಆಳವಾಗಿ ವಿಚಾರ ಮಾಡಿದಾಗ ಈ ವಿಷಯದ ಅಗಾಧತೆ ನಮಗೆ ಅರಿವಾಗುತ್ತದೆ. ಮಹಿಳಾ ಮಂಡಳಿಗಳು, ಶಿಕ್ಷಣ ಸಂಸ್ಥೆಗಳು, ಯುವ ಸಂಘಟನೆಗಳು, ಮಹಿಳಾ ಸಂಘಟನೆಗಳು, ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘ ಸಂಸ್ಥೆಗಳು, ಸರಕಾರದ ವಿಭಾಗಗಳು ಹೀಗೆ ನಮ್ಮ ಸಮಾಜದ ಅನೇಕ ರಂಗಗಳಲ್ಲಿ, ಅನೇಕ ಸ್ತರಗಳಲ್ಲಿ ಇಂದು ಹಿಂದೆಂದಿಗಿಂತಲೂ ಹೆಚ್ಚಾಗಿ ಮಹಿಳೆಯರ ಸಮಸ್ಯೆ, ಸ್ಥಾನಮಾನಗಳ ಕುರಿತಾಗಿ ಚರ್ಚೆ, ಅಧ್ಯಯನ, ವಿಚಾರ ವಿಮರ್ಶೆ ನಡೆಯುತ್ತಿದೆ. ಆದರೆ ಈ ರೀ ಪದ್ಧತಿಯ ಬಗ್ಗೆ ನಾನು ಈವರೆಗೂ ಎಲ್ಲಿಯೂ ಲೇಖನ, ಕತೆ ಅಥವಾ ಕವನವನ್ನು ನೋಡಿಲ್ಲ. ಜಾತಿ ಸಮಸ್ಯೆ, ಭಾಷಾ ಸಮಸ್ಯೆ, ಪರಿಸರ ಸಮಸ್ಯೆ ಹೀಗೆ ಜೀವನದ ಅನೇಕ ವಿಷಯಗಳ ಸಂದರ್ಭದಲ್ಲಿ ಒಳ್ಳೆಯ ಪ್ರಗತಿಪರ ನಿಲುವುಗಳನ್ನು, ಚಟುವಟಿಕೆಗಳನ್ನು ಹೊಂದಿರುವ ಜನರು ಈ ವಿಷಯದಲ್ಲಿ ದಿವ್ಯ ಮೌನ ತಾಳಿದಂತಿದೆ. ಅಷ್ಟೇ ಏಕೆ; ಸ್ತ್ರೀ ಸಮಾನತೆಯಲ್ಲಿ ನಿಜವಾಗಿಯೂ ನಂಬಿಕೆಯಿಟ್ಟುಕೊಂಡಿರುವವರೂ ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿದಂತಿಲ್ಲ.

ಮೊದಲು ವಿಷಯವನ್ನು ಸ್ವಲ್ಪ ನೋಡೋಣ. ಹೆಂಗಸಿಗಿಂತ ಗಂಡಸು ಶ್ರೇಷ್ಠ ಎಂಬ ವಿಚಾರ ಜನಮಾನಸದಲ್ಲಿ ಮನೆ ಮಾಡುತ್ತ ಹೋದಂತೆ, ಸಮಾಜದಲ್ಲಿ ಪುರುಷ ಪ್ರಧಾನ ಮೌಲ್ಯಗಳು ಗಟ್ಟಿಯಾಗುತ್ತಾ ಹೋದಂತೆ ಈ ರೀ ಪದ್ಧತಿ ಚಲಾವಣೆಯಲ್ಲಿ ಬಂದಿತು.

ಈ ರೀ ಪದ್ಧತಿ ಈಗ ನಮ್ಮ ಸಮಾಜದಲ್ಲಿ ಇದೆ. ಆದರೆ ಎಲ್ಲ ಜನವರ್ಗಗಳಲ್ಲೂ ಇದೆಯೆ? ಎಂಬುದಕ್ಕೆ ಉತ್ತರ ಇಲ್ಲ. ಹಳ್ಳಿಗಳಲ್ಲೂ, ಜಾತಿ ಪದ್ಧತಿಯ ಪ್ರಕಾರ ಕೆಳಜಾತಿಗಳೆಂದು ಪರಿಗಣಿಸಲ್ಪಡುವ ಅನೇಕ ಜಾತಿಗಳ ಜನರಲ್ಲಿ ಅದರಲ್ಲೂ ಶಾಲಾಶಿಕ್ಷಣದಿಂದ ದೂರವುಳಿದಿರುವವರಲ್ಲಿ ಈ ಪದ್ಧತಿ ಇಲ್ಲವೇ ಇಲ್ಲ. ನಗರ ಪ್ರದೇಶಗಳ ಜನರಲ್ಲಿ ಅದರಲ್ಲೂ ಉಚ್ಚ ಜಾತಿಯ, ಶಾಲಾ ಶಿಕ್ಷಣ ಪಡೆದ ಜನರಲ್ಲಿ ಈ ಪದ್ಧತಿ, ಪ್ರಚಲಿತವಾಗಿದೆ. ಉಚ್ಚ ಜಾತಿಗಳೊಳಗೇ ಅತ್ಯುಚ್ಚ ಜಾತಿ ಎಂದು ಎಣಿಸಲ್ಪಡುವ ಬ್ರಾಹ್ಮಣರೊಳಗಂತೂ ಈ ಪದ್ಧತಿ ನೂರಕ್ಕೆ ನೂರರಷ್ಟು ಬಳಕೆಯಲ್ಲಿದೆ ಅಂದರೆ ತಪ್ಪಾಗಲಿಕ್ಕಿಲ್ಲ. ಈ ಮಾತನ್ನು ಎತ್ತಿ ಹೇಳುವ ಉದ್ದೇಶವಿಷ್ಟೇ: ಶತಮಾನಗಳಿಂದಲೂ ಅಕ್ಷರ ಜ್ಞಾನವನ್ನು ಹಾಗೂ ತನ್ಮೂಲಕ ಧರ್ಮ, ಆಧ್ಯಾತ್ಮ, ಸಂಸ್ಕೃತಿ, ಇತಿಹಾಸ ಇತ್ಯಾದಿಗಳ ಜ್ಞಾನವನ್ನು ತಮ್ಮ ಆಸ್ತಿಯನ್ನಾಗಿಸಿಕೊಂಡವರು ಬ್ರಾಹ್ಮಣರು. ಅಲ್ಲದೆ ಇಂದಿನ ಯುಗದಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಆಧುನಿಕ ಶಿಕ್ಷಣವನ್ನು ಪಡೆದಿರುವವರು ಬ್ರಾಹ್ಮಣರು; ಹೀಗಿದ್ದೂ ಬ್ರಾಹ್ಮಣರೊಳಗೇ ರೀ ಪದ್ಧತಿಯಂತಹ ಒಂದು ವಿಷಮ ಪದ್ಧತಿ ಏಕೆ ಸಾರ್ವತ್ರಿಕವಾಗಿದೆ ಎಂಬುದು ನಿಜಕ್ಕೂ ಸಂಶೋಧನಾರ್ಹವಾದ ಸಂಗತಿ.

ಪ್ರಾಚೀನ ಕಾಲದಲ್ಲಿ ನಮ್ಮ ಸಂಸ್ಕೃತಿಯಲ್ಲಿ ಹೆಂಗಸರಿಗೂ ಗಂಡಸರಷ್ಟೇ ಸ್ಥಾನಮಾನವಿತ್ತು, ಸ್ವಾತಂತ್ರ್ಯವಿತ್ತು ಎಂದು ಹೇಳಲಾಗುತ್ತದೆ, ಇದ್ದೀತು. ಆದರೆ ಕಳೆದ ಎರಡು ಮೂರು ಸಾವಿರ ವರ್ಷಗಳ ಇತಿಹಾಸದಲ್ಲಿಯಂತೂ ಹೆಂಗಸರಿಗೆ ಯಾವಾಗಲೂ ಎರಡನೇ ಸ್ಥಾನವೇ. ಹಲಕೆಲವು ಧಾರ್ಮಿಕ ವಿಧಿಗಳಲ್ಲಿ ಹೆಂಗಸರಿಗೆ ಸಮಾನ ಪಾತ್ರ, ಮಹತ್ವ ದೊರೆತರೂ ಬಹುತೇಕ ಕಡೆ ಸಿಗುವದು ಕಡಿಮೆಯ ಸ್ಥಾನವೇ. ಹೀಗಿದ್ದರೂ ಕೂಡ ಧಾರ್ಮಿಕ ಗ್ರಂಥಗಳಲ್ಲಿ ಎಲ್ಲಿಯೂ ಹೆಂಡತಿ ತನ್ನ ಗಂಡನಿಗೆ ಬಹುವಚನದಿಂದ ಮಾತನಾಡಿಸಬೇಕು ಎಂದು ಹೇಳಲಾಗಿಲ್ಲ. ಬ್ರಾಹ್ಮಣರ ವಿವಾಹವಿಧಿಗಳ ಬಗ್ಗೆ ಹೇಳುವುದಾದರೆ ಅವೆಲ್ಲ ಹೆಚ್ಚು ಕಡಿಮೆ ಪುರುಷ ಶ್ರೇಷ್ಠ ಮೌಲ್ಯಗಳ ಮೇಲೆಯೇ ಆಧಾರಿತವಾಗಿದೆಯಾದರೂ ರೀ ಪದ್ಧತಿಗೆ ಅಪ್ಪಣೆಯಾಗಲೀ, ಮಾನ್ಯತೆಯಾಗಲೀ ಎಲ್ಲಿಯೂ ದೊರಕುವುದಿಲ್ಲ.

(ಸಾಮಾಜಿಕ ನಡವಳಿಕೆಯಲ್ಲಿ) ನಮಗೆ ಅತ್ಯಂತ ಸಮೀಪದ ಸಂಬಂಧಿಗಳಿಗೆ, ಬಹಳ ಪ್ರೀತಿಪಾತ್ರರಾದವರಿಗೆ, ಆತ್ಮೀಯರಾದವರಿಗೆ ಅವರು ವಯಸ್ಸಿನಿಂದ ದೊಡ್ಡವರಾಗಿದ್ದರೂ ನಾವು ಅವರಿಗೆ ರೀ ಹಾಕುವುದಿಲ್ಲ. ಹಾಗೆಯೇ ಬಾಲ್ಯದ ಸ್ನೇಹಿತರಿಗೆ ರೀ ಹಾಕುವುದಿಲ್ಲ. ದೊಡ್ಡವರಾದ ಬಳಿಕ ದೊರೆಯುವ ಸ್ನೇಹಿತರಿಗೆ, ಸಹೋದ್ಯೋಗಿಗಳಿಗೆ, ಪರಿಚಯಸ್ಥರಿಗೆ ಮೊದಮೊದಲು 'ರೀ' ಯಿಂದಲೇ ಪ್ರಾರಂಭವಾಗುವ ಸಂಬಂಧ ಆಮೇಲೆ ಏಕವಚನಕ್ಕೆ ತಿರುಗಬಹುದು. ಯಾವಾಗ ಈ ಬಹುವಚನ ಏಕವಚನಕ್ಕೆ ತಿರುಗುತ್ತವೆ ಎಂಬುದನ್ನು ಹೇಳುವುದು ಕಷ್ಟ. ಪರಿಚಯ ವಿರಳವಾದಷ್ಟೂ, ಆತ್ಮೀಯವಾದಷ್ಟೂ ರೀ ಕಳಚಿಹೋಗುವ ಸಾಧ್ಯತೆಗಳು ಹೆಚ್ಚು. (ಕೆಲವೊಮ್ಮೆ ಅಪವಾದಗಳುಂಟು)

ಇತಿಹಾಸದಲ್ಲಿ ಹೆಚ್ಚು ಕಡಿಮೆ ಕಳೆದ ಶತಮಾನದ ಕೊನೆಯವರೆಗೆ ಆಗಿಹೋದ ಯಾವ ದೊಡ್ಡ ವ್ಯಕ್ತಿಗೂ ನಾವು ರೀ ಹಾಕುವುದಿಲ್ಲ (ವಾಲ್ಮೀಕಿ, ಬುದ್ಧ, ಅಶೋಕ, ಪುಲಿಕೇಶಿ, ಅಕ್ಕಮಹಾದೇವಿ, ಕುಮಾರವ್ಯಾಸ, ಶಿವಾಜಿ, ಟಿಪ್ಪುಸುಲ್ತಾನ್, ಸರ್ವಜ್ಞ, ಓಬವ್ವ ಹೀಗೆ ಇವರೆಲ್ಲರ ಬಗ್ಗೆ ಹೇಳುವಾಗ ಏಕವಚನದಲ್ಲೇ ಹೇಳುತ್ತಿರುತ್ತೇವೆ. ಪುರಂದರದಾಸರು, ಕನಕದಾಸರು ಹೀಗೆ ಕೆಲವರು ಮಾತ್ರ ಅಪವಾದಗಳಷ್ಟೆ) ಆದರೆ ಈ ಶತಮಾನದ ಎಲ್ಲ ಪ್ರಸಿದ್ಧ ವ್ಯಕ್ತಿಗಳಿಗೂ ರೀ ಬಂದು ಬಿಟ್ಟಿತು. ಟಿಳಕರು, ಅಂಬೇಡ್ಕರ್, ವಿಶ್ವೇಶ್ವರಯ್ಯ, ಸರೋಜಿನೀ ನಾಯ್ಡು, ಬೇಂದ್ರೆ, ಕುವೆಂಪು ಹೀಗೆ ಎಲ್ಲರನ್ನೂ ನಾವು ರೀ ಹಾಕಿಯೇ ಸಂಬೋಧಿಸುತ್ತೇವೆ. ಇಲ್ಲಿ ಇನ್ನೊಂದು ವಿಶೇಷವನ್ನು ಗಮನಿಸಬೇಕು. ಇಂದು ಪ್ರಸಿದ್ಧ ವ್ಯಕ್ತಿಗಳ ಬಗ್ಗೆ ನಾವು ಅಂದರೆ ಜನಸಾಮಾನ್ಯರು ನಮ್ಮನಮ್ಮೊಳಗೆ ಮಾತನಾಡಿಕೊಳ್ಳುವಾಗ ರೀ ಹಾಕುವುದಿಲ್ಲ. ಆದರೆ ಇದೇ ವ್ಯಕ್ತಿಗಳ ಬಗ್ಗೆ ಪತ್ರಿಕೆಗಳಲ್ಲಿ ಬರೆಯುವಾಗ ವೇದಿಕೆಗಳ ಮೇಲೆ ಮಾತನಾಡುವಾಗ ರೀ ಹಾಕುತ್ತೇವೆ.

ಅಂದರೆ ಗೌರವಾರ್ಥಕ ಬಹುವಚನವನ್ನೂ ನಾವು ಬಳಸುವುದು ಒಬ್ಬ ವ್ಯಕ್ತಿಯನ್ನು ಗೌರವದಿಂದ ಸಂಬೋಧಿಸುವಾಗ, ಆದರೆ ಗಂಡ ಹೆಂಡತಿಯ ನಡುವಿನ ಸಂಬಂಧ ಎಂತಹದು? ಮದುವೆಯಾಗುವಾಗ ಗಂಡಸು ಮತ್ತು ಹೆಂಗಸಿನ ನಡುವೆ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಅದೇನೆ ವ್ಯತ್ಯಾಸಗಳಿದ್ದರೂ ವ್ಯಕ್ತಿಗಳಾಗಿ ಅವರಿಬ್ಬರೂ ಸರಿಸಮಾನರು ಅನ್ನುವ ತಳಹದಿಯ ಮೇಲೆಯೇ ಅವರ ಮದುವೆಯಾಗುತ್ತವೆ. ಇದು ತಾತ್ವಿಕವಾಗಿ ಮತ್ತು ಸಂವಿಧಾನಾತ್ಮಕವಾಗಿ ಸ್ವೀಕೃತವಾಗಿರುವ ವಿಷಯ. ವೈವಾಹಿಕ ಜೀವನವೆನ್ನುವುದು ಎರಡು ಗಾಲಿಗಳ ಮೇಲೆ ಓಡುವ ಗಾಡಿ ತಾನೆ? ಇಬ್ಬರಲ್ಲಿ ಪರಸ್ಪರ ಪ್ರೇಮ ವಿಶ್ವಾಸಗಳು ಇರುವಲ್ಲಿ ಹೆಂಡತಿ ತನ್ನ ಗಂಡನಿಗೆ ಗೌರವಾರ್ಥಕ ಬಹುವಚನ ಹಾಕುವುದು ಅನವಶ್ಯಕವಾಗುತ್ತದೆ, ಮತ್ತು ಅಸಮರ್ಥನೀಯವಾಗುತ್ತವೆ. ಪ್ರೇಮ, ವಿಶ್ವಾಸಗಳಿಗಿಂತ ಗೌರವವೇ ಹೆಚ್ಚು ಮುಖ್ಯ ಅನ್ನುವಲ್ಲಿಯೂ ಅದು ಪರಸ್ಪರ ಗೌರವವಾಗಿರಬೇಕು ಅಲ್ಲವೆ? ಅಂದ ಬಳಿಕ ಗಂಡ ಹೆಂಡತಿ ಇಬ್ಬರೂ ಒಬ್ಬರಿಗೊಬ್ಬರು ರೀ ಹಾಕಬೇಕೆ ಹೊರತು ಕೇವಲ ಹೆಂಡತಿ ಗಂಡನಿಗೆ ರೀ ಹಾಕಬೇಕು ಅನ್ನುವುದು ಯಾವ සೀಮೆಯ ನ್ಯಾಯ ?.

ರೀ ಪದ್ಧತಿ ಬಹಳ ಅಮುಖ್ಯವಾದುದು. ಅದಕ್ಕೆ ಮಹತ್ವಕೊಡುವ ಕಾರಣವಿಲ್ಲ ಅನ್ನುವವರಿಗೆ ಒಂದು ಒಂದು ಪ್ರಶ್ನೆ. ಹೆಂಡತಿ ಗಂಡನನ್ನು ಏಕವಚನದಲ್ಲಿ ಮಾತಾಡಿಸಿ, ಗಂಡ ಹೆಂಡತಿಯನ್ನು ಗೌರವಾರ್ಥಕ ಬಹುವಚನದಿಂದ ಮಾತಾಡಿಸುವ ಒಂದೇ ಒಂದು ದಾಂಪತ್ಯವನ್ನು ನೀವು ತೋರಿಸಬಲ್ಲಿರಾ? ಶಕ್ಯವೇ ಇಲ್ಲ. ಬೇಕಿದ್ದರೆ ನೀವು ಸೂರ್ಯನನ್ನು ಪಶ್ಚಿಮದಲ್ಲಿ ಹುಟ್ಟಿಸಬಹುದು. ಆದರೆ ಇಂತಹ ಒಬ್ಬನೇ ಒಬ್ಬ ಗಂಡನನ್ನು ನೀವು ಹುಡುಕಿ ತರಲಾರಿರಿ. ಕಾರಣ ಸರಳವಾಗಿದೆ ಇಂತಹ ಗಂಡ "ಅಮ್ಮಾವ್ರ ಗಂಡ" ಅನ್ನುವ ಕಲ್ಪನೆಯ ಉತ್ತುಂಗ ಶಿಖರವಾಗುತ್ತಾನೆ. ಇಂತಹವನನ್ನು ನಮ್ಮ ಸಮಾಜ ಸ್ವೀಕರಿಸುವುದೇ ಇಲ್ಲ. ಈ ರೀ ಸಂಬೋಧನೆ ಪದ್ಧತಿಯಲ್ಲಿಯೇ ಗಂಡ ಹೆಂಡತಿಯ ಪರಸ್ಪರ ಸ್ಥಾನಮಾನಗಳ ಮೂಲ ಇರುವುದು. ಒಂದು ದಾಂಪತ್ಯದಲ್ಲಿ ರೀ ಪದ್ಧತಿ ಇದೆಯೆಂದರೆ ಗಂಡನ ಸ್ಥಾನ ಹೆಚ್ಚು, ಹೆಂಡತಿಯ ಸ್ಥಾನ ಕಡಿಮೆ ಎಂದು ಅರ್ಥ. ಇದಕ್ಕೆ ಅಪವಾದಗಳನ್ನು ಕೊಡುವುದು ನಿಯಮವನ್ನೆ ಪುಷ್ಟೀಕರಿಸಿದಂತೆ ಆಗುತ್ತವೆಯೇ ಹೊರತು ಮತ್ತೇನೂ ಅಲ್ಲ. ಕೇವಲ ರೀ ಪದ್ಧತಿಯನ್ನು ಹೋಗಲಾಡಿಸುವುದರಿಂದ ಹೆಂಗಸರ ಪರಿಸ್ಥಿತಿ ಸುಧಾರಿಸುತ್ತದೆಯೇ ಎಂದು ಕೇಳುವವರೂ ಇದ್ದಾರೆ. ಇಂತಹ ಪ್ರಶ್ನೆಯನ್ನು ಕೇಳುವದೆಂದರೆ ಬ್ರಾಹ್ಮಣರಲ್ಲಿ ವಿಧವೆಯರ ತಲೆಬೋಳಿಸುವ ಪದ್ಧತಿಯಿತ್ತು; ಅದನ್ನು ಹೋಗಲಾಡಿಸುವದರಿಂದ ಬ್ರಾಹ್ಮಣ ಹೆಂಗಸರ ಪರಿಸ್ಥಿತಿ ಸುಧಾರಿಸಿದೆಯೇ ಎಂದು ಕೇಳಿದಂತೆ. ವಿಧವೆಯರ ತಲೆ

ಬೋಳಿಸುವುದು ಒಂದು ಪ್ರಕಾರವಾದ ಅನಿಷ್ಟವಾದ ಪದ್ಧತಿ. ಅದು ಹೋಗಬೇಕಾಗಿದ್ದಿತು. ಈಗ ಹೆಚ್ಚು ಕಡಿಮೆ ಹೋಗಿದೆ. ಇದೇ ಒಂದು ಸುಧಾರಣೆ. ಅದೇ ರೀತಿ ಈ ರೀ ಪದ್ಧತಿಯೂ ಕೂಡ ಒಂದು ಸ್ತ್ರೀ ವಿರೋಧ ಮನೌಲ್ಯದ ಪದ್ಧತಿ. ಆದುದರಿಂದ ಇದೂ ತೊಲಗಬೇಕು. ಇದು ತೊಲಗುವುದರಿಂದ ಹೆಂಗಸರ ಎಲ್ಲ ಸಮಸ್ಯೆಗಳೂ ಬಗೆಹರಿಯುತ್ತವೆ ಎಂದಲ್ಲ. ಆದರೆ ಹೆಂಗಸರ ಸ್ಥಾನ-ಮಾನ, ಆತ್ಮವಿಶ್ವಾಸ ಸುಧಾರಿಸುವುದರಲ್ಲಿ ಇದು ಒಂದು ಚಿಕ್ಕದಾದರೂ ಮಹತ್ವದ ಹೆಜ್ಜೆಯಾಗುತ್ತದೆ. ಬದಲಾವಣೆಯ ಜವಾಬ್ದಾರಿಯು ಹೊಸ ತಲೆಮಾರಿನ ಹೊಸ ಹುರುಪಿನ ಯುವ ಜನಾಂಗದ ಮೇಲೆಯೇ ಇರುತ್ತದೆ. ಆದ್ದರಿಂದ ಯುವತಿ-ಯುವಕರು ಹೊಸ ತಿಳುವಳಿಕೆಯಿಂದ ಈ ಸುಧಾರಣೆಗೆ ಸಿದ್ಧರಾಗಬೇಕು. ಈ ರೀ ಪದ್ಧತಿ ಇಲ್ಲವಾಗಿ ಹೆಂಡತಿ ಇಬ್ಬರೂ ಪರಸ್ಪರ ಏಕವಚನದಲ್ಲಿಯೇ ಸಂಬೋಧಿಸುವ ಸಂಪ್ರದಾಯ ರೂಢಿಯಾಗಬೇಕು, ಪ್ರಜ್ಞಾವಂತ ಹಿರಿಯರು ಮತ್ತು ಸ್ನೇಹಿತರು ಈ ಬದಲಾವಣೆಯನ್ನು ಪ್ರೋತ್ಸಾಹಿಸಬೇಕು.

●

---

ಮಹಿಳೆಯ ಸ್ಥಿತಿಯ ಸಮಸ್ಯೆಯನ್ನು ಹುಟ್ಟುಹಾಕುವ ನಾಲ್ಕು ಮುಖ್ಯ ಸಾಮಾಜಿಕ ಸಂರಚನೆಗಳು: ಉತ್ಪಾದನೆ, ಸಂತಾನೋತ್ಪತ್ತಿ, ಲಿಂಗ ಮತ್ತು ಮಕ್ಕಳ ಸಮಾಜೀಕರಣ. ಈ ಪ್ರತಿಯೊಂದು ಸಂರಚನೆಯೂ ಯಾವುದಾದರೂ ಒಂದು ಚಾರಿತ್ರಿಕ ಅವಧಿಯಲ್ಲಿ ತನ್ನದೇ ಆದ 'ಪ್ರಮುಖತೆ'ಯನ್ನು ತಲುಪಿರಬಹುದಾದರೂ ಈ ನಾಲ್ಕೂ ಸಂರಚನೆಗಳು ಮೂರ್ತವಾಗಿ ಸಂಯೋಜನೆಗೊಳ್ಳುವುದರ ಫಲವಾಗಿ ಮಹಿಳೆಯ ಸ್ಥಿತಿ ಹುಟ್ಟಿಬಂದಿದೆ. ಈ ಸಂಯುಕ್ತ ಏಕತೆಯ ಸ್ವರೂಪವೇನು? ಹೇಗೆ ಇದನ್ನು ಬದಲಿಸಬೇಕಾಗಿದೆ ಎಂಬುದನ್ನು ತಿಳಿಯಲಿಕ್ಕಾಗಿ ಇವುಗಳನ್ನು ಪ್ರತ್ಯೇಕವಾಗಿಯೇ ಪರಿಶೀಲಿಸಬೇಕು. ....ಈ ನಾಲ್ಕೂ ಸಂರಚನೆಗಳು ಸಮಗ್ರೀಕೃತವಾಗಿರುವ ರೀತಿಯಲ್ಲಿ ಪೂರ್ಣ ಬದಲಾವಣೆ ಸಾಧ್ಯವಾದರೆ ಮಾತ್ರ ಮಹಿಳೆಯ ವಿಮೋಚನೆಯೂ ಸಾಧ್ಯ. ಇವುಗಳಲ್ಲಿ ಕೇವಲ ಯಾವುದಾದರೂ ಒಂದನ್ನು ಸುಧಾರಿಸಿದರೆ, ಇನ್ನೊಂದಕ್ಕೆ ಒತ್ತು ದೊರೆತು ಆ ಸುಧಾರಣೆಯನ್ನು ಒತ್ತರಿಸಿಬಿಡಬಹುದು. ಇದರಿಂದ ಶೋಷಣೆಯ ರೂಪದಲ್ಲಿ ಕ್ರಮವ್ಯತ್ಯಾಸವನ್ನು ಮಾತ್ರ ಸಾಧಿಸಿದ್ದಾಗಬಹುದು ಅಷ್ಟೆ.... ಒಂದು ಕ್ರಾಂತಿ ಕಾರಕ ಚಳವಳಿ ಈ ಪ್ರತಿಯೊಂದೂ ಸಂರಚನೆಯ ವಿಷಮ ಬೆಳವಣಿಗೆಗಳ ವಿಶ್ಲೇಷಣೆಯ ತಳಹದಿಯ ಮೇಲೆ ರೂಪುಗೊಂಡು, ಇವುಗಳ ಸಂಯೋಜನೆಯಲ್ಲಿನ ಅತ್ಯಂತ ದುರ್ಬಲ ಕೊಂಡಿಗಳ ಮೇಲೆ ಆಕ್ರಮಣ ಕೈಗೊಳ್ಳಬೇಕು. ಮುಂದಿನ ಸಾಧಾರಣ ಬದಲಾವಣೆಗೆ ಈ ಯತ್ನ ಒಂದು ಹೊಸಮಾರ್ಗಕ್ಕೆ ತೆರಳುಬಿಂದುವಾದೀತು.

—ಜ್ಯೂಲಿಯಟ್ ಮಿಷೆಲ್

(The Longest Revolution ನಿಂದ)

---

ಮಹಿಳೆಯರನ್ನಾಗಿ ನಮ್ಮನ್ನು ಈ ಸಂಸ್ಕೃತಿಯಲ್ಲಿ ಬೆಳೆಸುವ ವಿಧಾನಗಳು ಅನೇಕ ಸಲ ಬಹು ಸೂಕ್ಷ್ಮರೂಪದ ಆಕ್ರಮಣ ಶೀಲತೆಗಳನ್ನು ನಿರಾಕರಿಸುವಂತೆ ನಮ್ಮನ್ನು ಉತ್ತೇಜಿಸುತ್ತವೆ. ಉದಾಹರಣೆಗೆ, ತಾಯ್ತನಕ್ಕೆ ಹೊಂದಿಕೊಂಡ ಬಹಳಷ್ಟು ಚರ್ಚೆಗಳು, ಮತ್ತು ಸ್ತ್ರೀಯರಿಗೆ ನೇರವಾಗಿ ಸಂಬಂಧಿಸಿದಂಥ ಚರ್ಚೆಗಳಲ್ಲಿ ಮಹಿಳೆಯರ ಕೋಪ ಮತ್ತು ಆಕ್ರಮಣ ಶೀಲತೆಗಳನ್ನು ಚರ್ಚಿಸುವುದನ್ನು ತಪ್ಪಿಸುವ ಯತ್ನವಿರುತ್ತದೆ. ಈ ಕೋಪ ಮತ್ತು ಆಕ್ರಮಣಶೀಲತೆಗಳನ್ನು ನಾವು ಹೇಗೆ ನಮ್ಮದೇ ವ್ಯಕ್ತಿತ್ವಗಳ ಒಳಕ್ಕೆ, ನಮ್ಮ ಮಕ್ಕಳ ಸಂಬಂಧದಲ್ಲಿ ಅವುಗಳನ್ನು ಅಂತರ್ಗತವಾಗಿಸಿಕೊಳ್ಳುತ್ತೇವೆ, ಅವುಗಳಿಗೆ ಹೇಗೆ ಅಭಿವ್ಯಕ್ತಿ ನೀಡುತ್ತೇವೆ ಎಂಬುದರ ಚರ್ಚೆಯನ್ನು ತಪ್ಪಿಸುವ ಪ್ರವೃತ್ತಿಯಿರುತ್ತದೆ. ಬಹುಶಃ ಸ್ತ್ರೀಯರು ಪುರುಷರಿಗಿಂತ ಕಡಿಮೆ ಆಕ್ರಮಣಶೀಲರಲ್ಲ. ಆದರೆ ನಮ್ಮ ಆಕ್ರಮಣ ಶೀಲತೆಯನ್ನು ನಾವು ಕೇವಲ ಬೇರೆಯ ರೀತಿ ಸಾಂಸ್ಕೃತಿಕವಾಗಿ ಅನುಮತಿಯಿರುವ (ಭಾಗಶಃ ರೂಪ ಮರೆಸಿಕೊಂಡ) ವಿಧಾನಗಳಲ್ಲಿ ವ್ಯಕ್ತಪಡಿಸುತ್ತೇವಷ್ಟೆ.

—ಜೇನ್ ಫ್ಲಾಕ್ಸ್

# ಆಸ್ಟ್ರೇಲಿಯಾದಲ್ಲಿ ಕಾನೂನಿನ ಅವ್ಯವಸ್ಥೆ

ಇತ್ತೀಚೆಗೆ ಆಸ್ಟ್ರೇಲಿಯಾದ ನ್ಯಾಯಾಲಯದಲ್ಲಿ ನೀಡಲಾದ ಎರಡು ತೀರ್ಪುಗಳು ಆ ದೇಶದ ನ್ಯಾಯಾಂಗ ವ್ಯವಸ್ಥೆ ರೀತಿಯ ಮೇಲೆ ಸಾಕಷ್ಟು ಬೆಳಕು ಬೀರುತ್ತವೆ.

ಮೊದಲನೆಯದಾಗಿ ಮಹಿಳೆಯೊಬ್ಬಳು ತನ್ನ ಗಂಡ ತನ್ನ ಮೇಲೆ ಅತ್ಯಾಚಾರವೆಸಗಿದ ಎಂಬ ದೂರನ್ನು ನ್ಯಾಯಾಲಯಕ್ಕೆ ಕೊಂಡೊಯ್ದಾಗ ಅಲ್ಲಿನ ನ್ಯಾಯಾಧೀಶ ಡೆರೆಕ್ ಬೋಲಸ್ ಆ ಪ್ರಕರಣ ಪರ ವಾದಿಸುತ್ತಿದ್ದ ವಕೀಲನಿಗೆ ಮತ್ತು ನ್ಯಾಯಾಲಯಕ್ಕೆ ನುಡಿದದ್ದು ಹೀಗೆ : "ಗಂಡನೊಬ್ಬ ಹೆಂಡತಿಯೊಂದಿಗೆ ಲೈಂಗಿಕ ಸಂಬಂಧ ಹೊಂದಲು ಸ್ವಲ್ಪ ಒರಟಾಗಿ ಒತ್ತಾಯಿಸಿದರೆ ಅದರಿಂದ ಅಂತಹ ಮಹತ್ತರ ಅ ಪ ರಾ ಧ ವೇ ನೂ ಆಗುವುದಿಲ್ಲ."

ಈ ತೀರ್ಪು ಬಂದ ಒಂದು ತಿಂಗಳ ನಂತರ 75 ವರ್ಷದ ಮುದುಕನೊಬ್ಬ ಒಂಭತ್ತು ವರ್ಷದ ಬಾಲಕಿಯ ಮೇಲೆ ಅತ್ಯಾಚಾರವೆಸಗಿದಾಗ ನ್ಯಾಯಾಧಿಪತಿ ಜಾನ್ ಓರೈಲಿಯು ಆ ಅಪರಾಧಕ್ಕಾಗಿ ಶಿಕ್ಷೆ ವಿಧಿಸದೆ ಆ ಮುದುಕನಿಗೆ ಒಳ್ಳೆಯ ನಡತೆಯವನೆಂಬ ಶಿಫಾರಸ್ಸು ಕೊಟ್ಟ. ಅವನು ನ್ಯಾಯಾಲಯಕ್ಕೆ ಕೊಟ್ಟ ವಿವರಣೆ ಹೀಗಿತ್ತು : 'ಹುಡುಗಿ ತುಂಬ ಚಿಕ್ಕವಳಾದ್ದರಿಂದ ಅವಳ ದೇಹದ ಮೇಲಾಗುವ ಪರಿಣಾಮಗಳು ಬಹು ಕಾಲ ಉಳಿಯುವಂತಹುದಲ್ಲ.'

ಜಾನ್ ಓ ರೈಲಿಯ ಈ ತೀರ್ಪಿನ ವಿರುದ್ಧ ವ್ಯಾಪಕವಾದ ಸಾವಜಾನಿಕ ಪ್ರತಿಭಟನೆಯು ಕಂಡು ಬಂದಿತು. ಬೋಲಸ್ ತನ್ನ ತೀರ್ಪಿಗಾಗಿ ಕ್ಷಮಾ ಯಾಚನೆ ಮಾಡಿಕೊಂಡರೂ, ಆಗಬಹುದಾದ ಮಾನಸಿಕ ಹಾನಿ ಆಗಿಯೇ ಹೋಗಿತ್ತು. ಹೊರಗಿನವರಿಗೆ ಎರಡೂ ತೀರ್ಪುಗಳು ಆಸ್ಟ್ರೇಲಿಯಾದ ಸಮಾಜವನ್ನು ದಶಕಗಳ ಹಿಂದಿನ ಕಾಲಕ್ಕೆ ಎಳೆದುಕೊಂಡು ಹೋದ ಅನುಭವವನ್ನು ಕೊಟ್ಟಿತು.

ಈ ಎರಡೂ ತೀರ್ಪುಗಳು ಜನರ ಪ್ರತಿರೋಧವನ್ನು ವ್ಯಾಪಕವಾಗಿ ಗಳಿಸಿವೆ. ನ್ಯಾಯಾಲಯದ ವಲಯದಲ್ಲೂ ಭಾರಿ ಟೀಕೆಗಳಿಗೆ ಗುರಿಯಾಗಿದೆ. ಅತ್ಯಂತ ಕೆಳಗಿನ ನ್ಯಾಯಾಲಯದಿಂದ ಹಿಡಿದು ಉಚ್ಚ ನ್ಯಾಯಾಲಯದವರೆಗೂ ಇದು ಚರ್ಚೆಯ ವಿಷಯವಾಗಿದೆ. ಬಹು ಮುಖ್ಯವಾಗಿ ಡಿಸ್ಟ್ರಿಕ್ ಕೋರ್ಟಿನ ಮ್ಯಾಜಿಸ್ಟ್ರೇಟ್ ಆಗಿರುವ ಪ್ಯಾಟ್ ಓ ಶೇನ್ ಗಟ್ಟಿಯಾದ ಪ್ರತಿಭಟನೆಯ ಧ್ವನಿಯೆತ್ತಿದ್ದಾಳೆ. ಆಸ್ಟ್ರೇಲಿಯಾದ ಮೊದಲ ಬುಡಕಟ್ಟು ಜನಾಂಗದ ನ್ಯಾಯ ಮೂರ್ತಿಯಾಗಿರುವ ಹಾಗೂ ಸ್ತ್ರೀಯರ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತಿರುವ ಈಕೆ ಮಹಿಳೆಯರ ಮೇಲಿನ ದೌರ್ಜನ್ಯಗಳ ವಿರುದ್ಧದ ಸಾವಜಾನಿಕ ನ್ಯಾಯದ ತೀರ್ಪು ನೀಡುತ್ತಿರುವವರಲ್ಲಿ ಪ್ರಮುಖಳು.

ಪ್ಯಾಟ್ ಓ ಶೇನ್ ಕಾನೂನು ಅಭ್ಯಾಸ ಮಾಡಿದ್ದೇ ಒಂದು ಆಕಸ್ಮಿಕ. ಒಮ್ಮೆ ಸ್ಥಳೀಯ ನ್ಯಾಯಾಲಯದಲ್ಲಿ ಕೂತಿದ್ದಳು. ಗಿರಿಜನ ಮಹಿಳೆಯೊಬ್ಬಳ ಮೇಲೆ ಪೋಲೀಸ್ ಅಧಿಕಾರಿಯೊಬ್ಬ ಅತ್ಯಾಚಾರ ನಡೆಸಿದ ಅಪರಾಧವನ್ನು ಕುರಿತು ವಿಚಾರಣೆ ನಡೆಯುತ್ತಿತ್ತು. ಆ ವಿಚಾರಣೆಯ ಒಟ್ಟು ಸಾರಾಂಶದಲ್ಲಿ ಮಹಿಳೆಯರೇ ಅತ್ಯಾಚಾರದ ಪ್ರಚೋದನೆಗೆ ಮೂಲ ಕಾರಣ ಎಂಬ ರೀತಿಯಲ್ಲಿ ಚರ್ಚೆ ನಡೆಯುತ್ತಿತ್ತು. ಕೂಡಲೇ ರೋಷದಿಂದ ಕುದಿದ ಅವಳು ಕಾನೂನು ಅಭ್ಯಾಸ ಮಾಡುವ ನಿರ್ಧಾರ ತೆಗೆದುಕೊಂಡಳು.

ಸಿಡ್ನಿ ಜಿಲ್ಲೆಯ ಮಾಜಿಸ್ಟ್ರೇಟ್ ಆಗಿದ್ದಾಗ ಪ್ಯಾಟ್ ಓ ಶೇವ್ ಮಹತ್ವದ ತೀರ್ಪುಗಳನ್ನು ತನ್ನ ಅಧಿಕಾರದ ಸ್ಥಾನದಿಂದ ನೀಡಿದಳು. ನ್ಯಾಯಮೂರ್ತಿ ಬೋಲಸ್ ವಿವಾದಾಸ್ಪದ ತೀರ್ಪು ನೀಡಿದ ವರ್ಷವೇ ಓ ಶೇನ್‌ಳೂ ಕೂಡ ಸುದ್ದಿಯಾದಳು. ನ್ಯಾಯಾಲಯದಲ್ಲಿ ಅವಳ ಮುಂದೆ ಐವರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿಯರಿದ್ದರು. ಬರ್ಲಿ ಬ್ರಾ ಬಿಲ್‌ಬೋರ್ಡ್‌ನ ಕಂಪನಿಯವರು ಈ ಐವರು ವಿದ್ಯಾರ್ಥಿನಿಯರ ವಿರುದ್ಧ ಹೊರಿಸಿದ್ದ ಆಪಾದನೆಯೆಂದರೆ ಅವರು ಆ ಕಂಪನಿಗೆ ದುರುದ್ದೇಶಪೂರಿತವಾಗಿ ಹಾನಿಯುಂಟುಮಾಡಿದ್ದಾರೆಂಬುದಾಗಿದೆ. ಆ ಕಂಪೆನಿಯ ಜಾಹೀರಾತೊಂದರಲ್ಲಿ ಹೆಣ್ಣೊಬ್ಬಳ ಚಿತ್ರವಿತ್ತು. ಅವಳ ಎದೆಯನ್ನು ಮಾಂತ್ರಿಕನೊಬ್ಬನು

ಗರಗಸದಿಂದ ಕೊಯ್ಯುವ ಚಿತ್ರವಿದಾಗಿತ್ತು. ಚಿತ್ರದ ಕೆಳಗೆ 'ನೀವು ಬರ್ಲಿ ಬ್ರಾನಲ್ಲಿ ಯಾವಾಗಲೂ ಸುಂದರ ವಾಗಿಯೇ ಕಾಣುತ್ತೀರಿ' ಎಂಬ ಸಾಲುಗಳಿದ್ದವು. ಈ ಜಾಹೀರಾತಿಗೆ ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿಯರು 'ನೀವು ಊನವಾಗಿದ್ದರೂ ಕೂಡ!' ಎಂಬ ಸಾಲುಗಳನ್ನು ಸೇರಿಸಿದರು. ಒಳವಸ್ತ್ರಗಳನ್ನು ಮಾರಲು ಆ ಕಂಪನಿಯು ಹೆಣ್ಣಿನ ಘನತೆ, ವ್ಯಕ್ತಿತ್ವಕ್ಕೆ ಕುಂದು ಬರುವಂತಹ ಜಾಹೀರಾತನ್ನು ನೀಡಿರುವುದೇ ಈ ವಿದ್ಯಾರ್ಥಿನಿಯರು ಪ್ರತಿಭಟಿಸಲು ಮುಖ್ಯ ಕಾರಣವಾಗಿತ್ತು. ವಿದ್ಯಾರ್ಥಿನಿಯರ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪಿದ ಪ್ಯಾಟ್ ಓ ಶೇನ್. ಬರ್ಲಿ ಬ್ರಾ ಬಿಲ್ ಬೋರ್ಡ್‌ನ ಮೊಕದ್ದಮೆಯನ್ನು ರದ್ದು ಮಾಡಿದಳು. ಆ ತೀರ್ಪನ್ನು ಸಿದ್ಧಗೊಳಿಸುವಾಗ ಅವಳು ಮುಂಚೆ ಮಹಿಳೆಯರ ದೌರ್ಜನ್ಯದ ವಿರುದ್ಧದ ಸಮಿತಿಗೆ ತಯಾರಿಸಿದ್ದ ವರದಿಯನ್ನು ನೆನಪಿಸಿಕೊಂಡಳು. ಅಶ್ಲೀಲ ಚಿತ್ರಗಳನ್ನು, ಲೈಂಗಿಕ ವಿಕಾರದ ಸಿನಿಮಾಗಳನ್ನು ತಯಾರಿಸುವಾಗ ಹೆಣ್ಣನ್ನು ವಿಕಲಾಂಗಗೊಳಿಸಿದ, ಕೆಲವೊಮ್ಮೆ ಕೊಲೆಯನ್ನೂ ಮಾಡಿದ ಪ್ರಕರಣಗಳನ್ನು ಉದಾಹರಿಸಿದಳು.

---

**ಅತ್ಯಾಚಾರ ಪ್ರಕರಣದಲ್ಲಿ ಬೋಲೆನ್ ನೀಡಿರುವ ತೀರ್ಪು ಪಿತೃಪ್ರಧಾನ ಸಮಾಜದ ಪಕ್ಷಪಾತ ಧೋರಣೆಯ ಪರಿಣಾಮ ವೆಂಬುದನ್ನು ಪ್ಯಾಟ್ ಓ ಶೇನ್‌ನಂತ ಇತರ ಹಲವಾರು ಮಂದಿ ನಂಬುತ್ತಾರೆ. ಆಸ್ಟ್ರೇಲಿಯಾದ ನ್ಯಾಯಾಂಗ ವ್ಯವಸ್ಥೆ ಇಂತಹ ದೃಷ್ಟಿಕೋನಕ್ಕೆ ಆಸ್ಪದ ಕೊಡುವುದಷ್ಟೇ ಅಲ್ಲದೆ ಇಂತಹ ಅಭಿಪ್ರಾಯಗಳಿಗೆ ಪ್ರೋತ್ಸಾಹ ನೀಡುತ್ತಿದೆ. ನ್ಯಾಯಾಲಯಗಳಲ್ಲಿ ಹೆಚ್ಚು ಮಂದಿ ಮಹಿಳೆಯರು ಪ್ರತಿನಿಧಿಸುವಂತಾದಾಗ ಈ ಸಮಸ್ಯೆಗೆ ಪರಿಹಾರ ದೊರಕಬಹುದೆಂಬುದು ಓ ಶೇನ್‌ಳ ಅಭಿಪ್ರಾಯ.**

---

ಆಸ್ಟ್ರೇಲಿಯಾದಲ್ಲಿ ಇಂದು ಸುಪ್ರೀಂಕೋರ್ಟ್‌ನಂತಹ ಉಚ್ಚ ಸ್ಥಾನಗಳಲ್ಲಿ ಜೇನ್ ಮ್ಯಾಥ್ಯೂನಂತಹ ನ್ಯಾಯಮೂರ್ತಿಗಳು, ಹೈಕೋರ್ಟುಗಳಲ್ಲಿ ಮೇರಿ ಗಾರ್ಡನ್, ಮಹ್ಲಾ ಪರ್ಲ್‌ಮನ್‌ನಂತಹ ಮಹಿಳಾ ನ್ಯಾಯಮೂರ್ತಿಗಳು ಕಂಡು ಬರುತ್ತಾರೆ. ಆಸ್ಟ್ರೇಲಿಯಾದ ಸಂವಿಧಾನ ರಚನಕಾರರಲ್ಲಿ ಎರಡನೆಯವರೆನಿಸಿಕೊಂಡ ಹಿಲೆರಿ ಪೆನ್‌ಫೋಲ್ಡ್ ಸಾರ್ವಜನಿಕ ಸೇವೆಗೆ ಬಂದಿರುವುದು ಒಂದು ಶುಭಸೂಚನೆ. ಇವುಗಳ ಜೊತೆಯಲ್ಲಿ ದೇಶದಲ್ಲಿರುವ ಹಲವಾರು ಕಾನೂನು ವಿದ್ಯಾಲಯಗಳಲ್ಲಿ ದಾಖಲಾಗುತ್ತಿರುವವರಲ್ಲಿ ವಿದ್ಯಾರ್ಥಿನಿಯರ ಸಂಖ್ಯೆಯೇ ಹೆಚ್ಚು. ಅಂಕಗಳನ್ನು ಗಳಿಸುತ್ತಿರುವ ಪ್ರತಿಭಾವಂತರಲ್ಲೂ ಮೊದಲ ಶೇಖಡ ಐದು ಭಾಗವಂತೂ ವಿದ್ಯಾರ್ಥಿನಿಯರೇ ಆಗಿದ್ದಾರೆ. ಇಷ್ಟೆಲ್ಲ ಅನುಕೂಲ ವಾತಾವರಣದಲ್ಲೂ ನ್ಯಾಯಪೀಠದಲ್ಲಿ ನೇಮಕವಾಗುವ ಮಹಿಳೆಯರ ಸಂಖ್ಯೆಯಂತೂ ಕಡಿಮೆಯೇ ಇದೆ.

"ನಾನು ಯಾವಾಗಲೂ ಸ್ತ್ರೀವಾದಿಯೆಂದು ಹೇಳಿಕೊಳ್ಳಲು ನಾಚಿಕೆಪಟ್ಟುಕೊಳ್ಳುವುದಿಲ್ಲ, ಹಾಗೆಯೇ ಅದಕ್ಕಾಗಿ ಕ್ಷಮೆಯಾಚಿಸುವುದಿಲ್ಲ, ಕೂಡ." ಎನ್ನುವ ಓ ಶೇನ್, ನಾನೊಬ್ಬ ಸ್ವತಂತ್ರ ನ್ಯಾಯಾಧಿಕಾರಿಯಾಗಿ ಕಾರ್ಯ ನಿರ್ವಹಿಸಲು, ಪ್ರಾಪಂಚಿಕ ದೃಷ್ಟಿಯನ್ನು ಬೆಳೆಸಿಕೊಳ್ಳಲು ಹಾಗೂ ನನ್ನ ಮುಂದೆ ಬರುವ ಜನರ ಅಹವಾಲುಗಳನ್ನು ನ್ಯಾಯಯುತವಾಗಿ ಕೇಳಲು ಈ ನನ್ನ ನಂಬಿಕೆ ಅಡ್ಡ ಬರುವುದಿಲ್ಲ. ಅಷ್ಟೇ ಅಲ್ಲ ಎಲ್ಲ ಜನರೂ ತಾವು ಸೇರಿದ ಜನಾಂಗ, ವರ್ಗ ಹಾಗೂ ಲಿಂಗದ ಮೂಲಕವೇ ಜಗತ್ತನ್ನು ಕಾಣಲು ಇಚ್ಛಿಸುವುದು' ಎಂದು ಗಟ್ಟಿಯಾಗಿ ಘೋಷಿಸುತ್ತಾಳೆ.

ನ್ಯಾಯಾಂಗ ವ್ಯವಸ್ಥೆಯಲ್ಲಿ ಸೇರ್ಪಡೆಯಾಗಿರುವ ಓ ಶೇನ್‌ನಂತಹವರಿಂದಾಗಿ ಸಮಾನತೆಯ, ಸಾಮಾಜಿಕ ನ್ಯಾಯದ ಜಗತ್‌ದೃಷ್ಟಿ ನೆಲೆಯಾಗಲು ಸಾಧ್ಯವಾಗುತ್ತದೆ. ಅಂತಹದೊಂದು ಸ್ಥಿತಿ ಏರ್ಪಟ್ಟಾಗ ಆಸ್ಟ್ರೇಲಿಯಾದಲ್ಲಿ ಕಂಡು ಬಂದ ಇಂತಹ ವಿಕೃತ ತೀರ್ಪುಗಳು ಮರೆಯಾಗುತ್ತವೆ. □

**–ವಿಚಾರಿ**

---

ಮಹಿಳೆಯರಿಗಿಂತ ಪುರುಷರಿಗೆ ಹೆಚ್ಚಿನ ಅಧಿಕಾರವಿರುವ ಸಮಾಜದಲ್ಲಿ ನಾವು ಬದುಕುತ್ತಿರುವುದರಿಂದ ಯಾವುದು ಹೆಚ್ಚು ಪ್ರಶಂಸನೀಯ ಎಂಬುದರ ನಮ್ಮ ಕಲ್ಪನೆ ಪುರುಷ ಸಂಬಂಧಿತ ಗುಣಗಳನ್ನೇ ಕುರಿತಿರುವುದು ಸಾಧ್ಯ. ಹೆಣ್ಣನ್ನು ಕುರಿತ 'ಹೊಗಳಿಕೆ'(ಭಾಗಶಃವಾದರೂ)ಕೂಡ ಮಹಿಳೆಯರನ್ನು ಒಂದು ನಿರ್ಬಂಧದಲ್ಲಿರಿಸುವ ಅಪೇಕ್ಷೆಯನ್ನು ಒಳಉದ್ದೇಶವಾಗಿ ಹೊಂದಿರುತ್ತವೆ.

**–ಜೇನ್ ಫ್ಲಾಕ್ಸ್**



# 'ಮಹಿಳೆ'ಯನ್ನು ಕುರಿತು

□ ಮೃಣಾಲ್ ಪಾಂಡೆ

ಮೃಣಾಲ್ ಪಾಂಡೆ ಅಲಹಾಬಾದ್ ವಿಶ್ವವಿದ್ಯಾಲಯದ ಪದವೀಧರೆ. ಈಕೆ ಸುಪರಿಚಿತ ಲೇಖಕಿ ಹಾಗೂ ಹಿಂದಿಪತ್ರಿಕೋದ್ಯಮಿ 'ವಾಮಾ' ಹಿಂದಿ ಪತ್ರಿಕೆಯನ್ನು ಪ್ರಾರಂಭಿಸಿ ಸಂಪಾದಕಿಯಾಗಿ ದುಡಿದ ಈಕೆ ಈಗ 'ಸಾಪ್ತಾಹಿಕ್ ಹಿಂದೂಸ್ತಾನ್' ಎಂಬ ಪ್ರಸಿದ್ಧ ವಾರ ಪತ್ರಿಕೆಯ ಸಂಪಾದಕಿ. ಉದ್ಯೋಗಸ್ಥ ಮಹಿಳೆಯರ ಕುರಿತಾಗಿ ಆಳವಾದ ಅಧ್ಯಯನ ನಡೆಸಿ ವರದಿ ಒಪ್ಪಿಸಿದ "ಶ್ರಮಶಕ್ತಿ" ಗುಂಪಿಗೆ ಸರ್ಕಾರದಿಂದ ಆಯ್ಕೆಯಾದ ಸದಸ್ಯೆ ಇವರು. ಇವರ ಪುಸ್ತಕ 'ದಿ ಸಬ್ಜೆಕ್ಟ್ ಈಸ್ ವುಮನ್' ಭಾರತೀಯ ಹೆಣ್ಣು ಮತ್ತು ಆಕೆಯ ಪರಿಸರವನ್ನು ಕುರಿತ ೨೦ ಪ್ರಬಂಧಗಳುಳ್ಳದ್ದು, ಲೇಖಕಿಯ ಅಜ್ಜಿಯಿಂದ ಹಿಡಿದು ಸಹೋದ್ಯೋಗಿಗಳು, ಹಿಂದಿ ಚಲನಚಿತ್ರಗಳ ಕೆಲವು ನಾಯಕಿಯರ ವರೆಗೂ ಮಹಿಳೆಯರ ಪಾತ್ರಗಳ ವಿಶ್ಲೇಷಣೆ ಇಲ್ಲಿನ ಕೆಲವು ಪ್ರಬಂಧಗಳಲ್ಲಿವೆ. ಸ್ತ್ರೀವಾದಿ ದೃಷ್ಟಿಕೋನಕ್ಕೆ ಇಂದಿನರೂಪ ದೊರಕಿಸಿಕೊಟ್ಟ ಮಹಿಳೆಯರನ್ನು ಕುರಿತಾದ ಪ್ರಬಂಧಗಳೂ ಇವೆ. ಭಾರತೀಯ ಹೆಣ್ಣಿನ ವಿವಿಧ ಮುಖಗಳನ್ನು ಪರಿಚಯಿಸುವ, ರೂಢಿಗತ ಕಲಿಕೆಯನ್ನು ಒಂದಿಷ್ಟು ಬದಲಿಸಲು ಯತ್ನಿಸುವ ಈ ಪುಸ್ತಕವನ್ನು ದಿಲ್ಲಿಯ 'ಸಂಚಾರ್ ಪಬ್ಲಿಷಿಂಗ್ ಹೌಸ್' ಪ್ರಕಟಿಸಿದೆ. ಈ ಕೃತಿಯಲ್ಲಿನ ಮೃಣಾಲ್ ಪಾಂಡೆಯವರ ವಿಚಾರಗಳ ಕಿರು ಸಂಗ್ರಹ ಇಲ್ಲಿದೆ.

ಹೆಣ್ಣಿನ ಅನುಭವಗಳ ಇತಿಹಾಸವನ್ನು ನಿಕಟವಾಗಿ ಗಮನಿಸಿದರೆ ಅಧಿಕಾರ ಕೆಡಿಸುವುದಿಲ್ಲ, ಅಸಹಾಯಕತೆ ಕೆಡಿಸುತ್ತದೆ ಎಂಬ ಸತ್ಯ ಅರಿವಾಗುತ್ತದೆ. ಯಶಸ್ಸಿನ ಶಿಖರದಲ್ಲಿ ಒಂಟಿತನವಿದೆ ಎನ್ನುವುದು ಸಾಮಾನ್ಯ ಹೇಳಿಕೆ. ಆದರೆ ಓಟದ ಮೈದಾನದಲ್ಲಿ ಓಡುವವನ ಏಕಾಂಗಿತನ, ಬದಿಯಲ್ಲಿ ಕುಳಿತವ ಹೆಳವನಲ್ಲದೆ, ಕೈಕಾಲು ಕಟ್ಟಿ ಹಾಕಿದ ವ್ಯಕ್ತಿಯಾದರೆ ಆತನ ದುರಂತವನ್ನು ಊಹಿಸಬಹುದು. ಮತ್ತೂ ನೋವಿನ ಸಂಗತಿ ಅಂದರೆ ಕೈಕಾಲು ಕಟ್ಟಿಹಾಕಲ್ಪಟ್ಟದ್ದನ್ನು ಕಾಣದ ಈ ವ್ಯಕ್ತಿ ತನ್ನಲ್ಲಿ ಆತ್ಮ ವಿಶ್ವಾಸ ಕಳಕೊಂಡು ತನ್ನನ್ನು ಹೆಳವನೆಂದೇ ನಂಬಿಕೊಂಡವನಾಗಿರುತ್ತಾನೆ.

ಭಾರತೀಯ ಮಹಿಳೆಯರ ವಿವಿಧ ಮುಖಗಳನ್ನು ಪರಿಚಯಿಸುವ ಯತ್ನದಲ್ಲಿ ನನ್ನ ಅಜ್ಜಿಯ ಬದುಕನ್ನೇ ಮೊದಲು ನೋಡಬಹುದು. ನನ್ನ ಅಜ್ಜಿಯ ೮೫ ವರ್ಷಗಳ ಜೀವನ ಕಾಲ ಭಾರತೀಯ ಜಮೀನುದಾರಿ ಹಾಗೂ ಸಾಂಪ್ರದಾಯಿಕ ಮೌಲ್ಯಗಳೊಂದಿಗೆ ಆರಂಭವಾಗಿ, ರಾಷ್ಟ್ರೀಯತೆ, ಆಧುನಿಕತೆಯ ಹೊಸ ಅಲೆಗಳನ್ನು ಕಂಡಿತು. ಸಂಪ್ರದಾಯಸ್ಥ ಪಹಾಡಿ ಬ್ರಾಹ್ಮಣರ ಶ್ರೀಮಂತ ವಂಶದಲ್ಲಿ ಹುಟ್ಟಿ ಏಳನೇ ವಯಸ್ಸಿಗೆ ವಿವಾಹವಾಗಿ, ಒಂಭತ್ತು ಮಕ್ಕಳನ್ನು ಹೆತ್ತವಳು ನನ್ನ ಅಜ್ಜಿ. ಜಾತಿ ವಿಷಯದಲ್ಲಿ ಆಕೆಯ ತಾಯಿ–ತಂದೆ ಸ್ವತಂತ್ರ ವಿಚಾರಗಳನ್ನು ಬೆಂಬಲಿಸಿದ್ದರೆಂಬ ಒಂದೇ ಕಾರಣಕ್ಕೆ ಆಕೆಗೆ ಅವರನ್ನು ನೋಡುವ ಅವಕಾಶ ತಪ್ಪಿತು. ಒಮ್ಮೆ ಕಳ್ಳತನದಿಂದ ಅಮ್ಮನನ್ನು ನೋಡಿ ಬರುವಾಗ ಸಿಕ್ಕಿ ಬಿದ್ದಾಗ ಆಕೆಗೆ ಸತ್ತವರ ಶ್ರಾದ್ಧ ಮಾಡಿ, ಮರುಹುಟ್ಟು, ವಿವಾಹವಿಧಿಗಳಿಂದ ಶುದ್ಧಿಗೊಳಿಸಿದ ನಂತರವೇ ಗಂಡನ ಮನೆಯವರು ಒಳಕ್ಕೆ ಕರಕೊಂಡರು. ಆ ಕಾಲದ ಹೆಂಗಸರ ಬದುಕಿನ ಚಿತ್ರ ಇದು.

ಮನುಷ್ಯನ ಯುದ್ಧ ದಾಹವನ್ನು, ಕ್ರೌರ್ಯದ ಯುದ್ಧಗಳನ್ನು ಹೆಮ್ಮೆಯಿಂದ ವೈಭವೀಕರಿಸುವ ಗಂಡು ಸಂಸ್ಕೃತಿ ನಮ್ಮದು. ನಮ್ಮ ನಾಡಿನ ಅತ್ಯಂತ ಭಯಾನಕ ಢಕಾಯಿತರನ್ನು, ಕಳ್ಳ ಕೊರಮರನ್ನು ನೀಡಿರುವ ಭಾಗವೇ ಅತಿ ಹೆಚ್ಚು 'ಸತಿ'ಯ ಪ್ರಕರಣಗಳನ್ನು

ದಾಖಲಿಸಿರುವ ವಾಸ್ತವವಿದೆ. ಚರಿತ್ರೆಯುದ್ದಕ್ಕೂ ಹೆಣ್ಣು ಈ ಬಡಿದಾಡುವ ಗಂಡಸರು ಲೂಟಿಮಾಡಿ, ಧ್ವಂಸಮಾಡಿ ಬಿಟ್ಟ ಜಗತ್ತಿನಲ್ಲಿ ವಾಸಿಸುತ್ತಿದ್ದಾಳೆ. ಈ ಗಂಡಸರು ಹೆಣ್ಣುತನವನ್ನು ಅತ್ಯಂತ ತುಚ್ಛವಾಗಿ ಅತ್ಯಂತ ಅಸಹ್ಯದಿಂದ ದ್ವೇಷದಿಂದ ಕಾಣುವುದು ಕೇವಲ ಪಿತೃಪ್ರಧಾನ ಸಮಾಜದ ಫಲಿತಾಂಶವಲ್ಲ. ಗಂಡಸಿನ ಬೆಳೆವ ಕ್ರಿಯೆ, ಮನೆಯಾಚೆಗೆ, ಮನೆಯಿಂದ ಹೊರಕ್ಕೆ ಇರುವುದೂ ಕಾರಣ. ಈ ಗಂಡಿನ ಬೆಳೆವ ಕ್ರಿಯೆ, ಮನೆಯಾಚೆಗೆ,ಹೆಣ್ಣಿನಿಂದ ದೂರವಾಗಿ, ಗಂಡುತನದ ಬಿಮ್ಮಿನಿಂದ ಬೆಳೆವುದೂ ಆಗಿದೆ. ಹಾಗಾಗಿಯೇ ಈ ಗಂಡುಗಳ ಹಾದಿಯಲ್ಲಿ ಹಾಯ್ದು ಹೆಂಗಸರು, ಕೇವಲ ಅವರ ಲೈಂಗಿಕತೆಗಷ್ಟೇ ಆಹಾರವಾಗುತ್ತಾರೆ.

ಹೆಣ್ಣು ಕೇವಲ ಮಗುವನ್ನು ಹೆರುತ್ತಾಳೆ, ಆದರೆ ಯುದ್ಧಗಳು ಯೋಧರನ್ನು ಹುಟ್ಟುಹಾಕುತ್ತ, ಹೊಡೆದಾಟ, ವಿನಾಶವನ್ನು ಒಂದಷ್ಟು ಗಂಡುತನದ ಹೆಮ್ಮೆಯಿಂದಲೇ ಬೀಗುತ್ತಾ ಹೇಳುವ ಈ ಸಂಸ್ಕೃತಿ, ಸತಿ ಪದ್ಧತಿಗೆ ಸ್ತ್ರೀಭ್ರೂಣ ಹತ್ಯೆಗೆ, ಹೆಣ್ಣು ಕೂಸಿನ ಹತ್ಯೆಗೆ ಅನುಮತಿ ನೀಡಿದೆ. ಡಿಯೋರಾಲದ ಸತಿಸ್ಥಳವನ್ನು ಕತ್ತಿ ಹಿಡಿದು ಕಾಯುವ ಗಂಡಸರು, ತಮ್ಮ ಸಂಪ್ರದಾಯವನ್ನು ಕಾಯಲು ತಮಗೆ ಕೊಲ್ಲುವ ಹಕ್ಕೂ ಇದೆ ಎಂದು ಸಾರುತ್ತಾರೆ. ನಮ್ಮ ಇಂದಿನ ಕಾಳಗ ಕುಲವನ್ನು ಯುದ್ಧದಲ್ಲಿ ಕಾಣುವುದಿಲ್ಲ. ಚುನಾವಣೆಗಳಲ್ಲಿ, ರಥಯಾತ್ರೆಗಳಲ್ಲಿ, ಸತಿ ಮೇಳಗಳಲ್ಲಿ ಕಾಣುತ್ತೇವೆ. ಅಷ್ಟೇ ಅಲ್ಲ, ಈ ಬಡಿದಾಡುವ ಪ್ರತಿಷ್ಠಿತರನ್ನು ಇಂದು ಆಫೀಸುಗಳಲ್ಲಿ, ಬೋರ್ಡ್ ಮೀಟಿಂಗುಗಳಲ್ಲೂ ಕಾಣುತ್ತೇವೆ. ಅವರು ಬದುಕುವುದು, ಯುದ್ಧಕ್ಕೆ, ಕಲಹಕ್ಕೆ, ಹೆಣ್ಣನ್ನು, ಅಲ್ಪಸಂಖ್ಯಾತರನ್ನು ತಮ್ಮ ಅಧಿಕಾರದಡಿಯಲ್ಲಿ ಇಟ್ಟು ಆಳುವುದಕ್ಕೆ ಇಂದೂ ಕಾಳಗದ ಕಲಿಗಳು, ಕ್ಷತ್ರಿಯ ಕುಲಗಳು ಬದುಕಿವೆ, ಪ್ರಭುತ್ವದಲ್ಲಿ ಪ್ರಮುಖ ಮಾಧ್ಯಮಗಳಲ್ಲಿ ಪ್ರತಿಷ್ಠಾಪಿತಗೊಂಡಿವೆ.

'ಸ್ವತಂತ್ರರ ಗುಪ್ತ ಅಸ್ವತಂತ್ರತೆ' ನಮ್ಮ ಪತ್ರಿಕೆಗಳ ಕಾರ್ಯಾಚರಣೆಯನ್ನು ಒಂದಿಷ್ಟು ಗಮನಿಸೋಣ ಸ್ವಾತಂತ್ರ್ಯ ಬಂದ ನಾಲ್ಕು ದಶಕಗಳ ನಂತರವೂ, ನಮ್ಮ ಪತ್ರಿಕೆಗಳು ತಮ್ಮ ಅಧಿಕಾರಿಗಳು ಎಳೆವ ನೀತಿ ನಿಯಮಗಳ ಲಕ್ಷ್ಮಣ ರೇಖೆಯೊಳಗೇ ನಿಂತಿವೆ, ನಮ್ಮ ಇಂದಿನ ಪತ್ರಿಕಾ ಮಾಧ್ಯಮಗಳು, ವಸಾಹತು ಶಾಹಿಯ ದಿನಗಳಲ್ಲಿ ಹುಟ್ಟಿ ಬೆಳೆದವು, ಹೀಗಾಗಿ ಆಂಗ್ಲ ಭಾಷೆಯ ಮೇಲೆ ಗುರುತರವಾಗಿ ಆಧರಿಸಿ ನಿಂತಿದ್ದರೆ ಅಚ್ಚರಿಯಲ್ಲ. ಇಂದಿಗೂ ನಾವು ನಮ್ಮ ಚಿಂತನೆಗಳಲ್ಲಿ ಮತ್ತೆ ಮತ್ತೆ ಹಿಂದಕ್ಕೆ ಜಾರಿ, ಪಶ್ಚಿಮದತ್ತ ಒಪ್ಪಿಗೆಗಾಗಿ ನೋಡುತ್ತೇವೆ, ೧೯೮೪ರಲ್ಲಿ ಸ್ವತಂತ್ರ ಪತ್ರಿಕೋದ್ಯಮಿಯೊಬ್ಬ ಭೂಪಾಲಿನ 'ಯೂನಿಯನ್ ಕಾರ್ಬೈಡ್ ಕಾರ್ಖಾನೆ'ಯ ಬಗ್ಗೆ ಬರೆದ ತೀವ್ರ ಸಂಶೋಧನೆಯ ವರದಿಯನ್ನು ಯಾವ ಆಂಗ್ಲ ಪತ್ರಿಕೆಯೂ ಪ್ರಕಟಿಸದೆ, ಕಡೆಗೆ ಹಿಂದಿ ದಿನಪತ್ರಿಕೆಯೊಂದರಲ್ಲಿ ಅದು ಪ್ರಕಟವಾಯಿತು. ದೇಶೀಯ ಭಾಷೆಯ ಪತ್ರಿಕೆಗಳನ್ನು ಓದದ, ಗಂಭೀರವಾಗಿ ತೆಗೆದುಕೊಳ್ಳದ ನಮ್ಮ ಪ್ರಭಾವಿ ಜನ, ಅದನ್ನು ನೋಡಲೂ ಹೋಗಲಿಲ್ಲ. ಭೂಪಾಲ್ ದುರಂತದ ನಂತರ 'ಟೈಮ್ಸ್' ಪತ್ರಿಕೆ ಇದನ್ನು ಉಲ್ಲೇಖಿಸಿದ್ದೇ ತಡ, ಪ್ರತಿಯೊಬ್ಬರೂ ಮತ್ತೆ ಮತ್ತೆ ಉಲ್ಲೇಖಿಸ ತೊಡಗಿದರು. ಹಿಂದಿ, ಮಳೆಯಾಳಂ, ಬೆಂಗಾಲಿ, ತಮಿಳು ಪತ್ರಿಕೆಗಳು ಅತ್ಯಧಿಕ ಓದುಗರನ್ನು ಪಡೆದಿದ್ದರೂ, ಅವುಗಳನ್ನು ಗಂಭೀರವಾಗಿ ತೆಗೆದುಕೊಳ್ಳುವವರಿಲ್ಲ. ಆಂಗ್ಲ ಭಾಷೆಯ ಪತ್ರಿಕೆಗಳು ಬಹಳಷ್ಟು 'ಸತಿ' ಪದ್ಧತಿಯನ್ನು ಖಂಡಿಸಿದವು ನಿಜ, ಆದರೆ ಕೆಲವು ಮಾರವಾರಿ ಮತ್ತು ಹಿಂದಿ ದಿನ ಪತ್ರಿಕೆಗಳು, ಇದೇ 'ಸತಿ'ಯನ್ನು ವೈಭವೀಕರಿಸಿ, ಪ್ರಶಂಶಿಸಿದರು. ಮಹಿಳಾ ಸಂಘ ಸಂಸ್ಥೆಗಳು ಇಂದು ಸಂಪಾದಕೀಯದ ವಿರುದ್ಧ ಧ್ವನಿ ಎತ್ತದಿದ್ದರೆ, ಅವು ಭಾರತದ ಬುದ್ಧಿಜೀವಿಗಳ ಗಮನಕ್ಕೆ ಬರುತ್ತಿರಲಿಲ್ಲ. ಇಲ್ಲಿ ಗಮನಿಸಬೇಕಾದ ಅಪಾಯವೆಂದರೆ, ಹಳ್ಳಿಗಾಡಿನ ಶೇಕಡಾ ೯೦ ಮಂದಿ ಓದುವುದು ಇಂಥಾ ಪತ್ರಿಕೆಗಳನ್ನೇ, ಸಾಲದ್ದಕ್ಕೆ ನಮ್ಮ ಪತ್ರಿಕೆಗಳು 'ಸತಿ' ಪ್ರಕರಣದ ವರದಿ ಮಾಡಿದ ರೀತಿ ಎಂಥದು? ಕೆಲಸಕ್ಕೆ ಬಾರದ ವಿವರಗಳನ್ನು ಬಿತ್ತರಿಸಿದರು. ಚುನರಿ ಮಹೋತ್ಸವದ ಚುನರಿಯ ಬಣ್ಣ ನೇಯ್ಗೆ, ಬೆಲೆಗಳ ವಿವರ. ಸ್ಮರಣಾರ್ಥಕ ವಸ್ತುಗಳ ರೂಪ, ವಿನ್ಯಾಸ, ಬೆಲೆ, ಇಂಥವುಗಳನ್ನು ಸವಿವರವಾಗಿ ನೀಡುವ ವರದಿಗಳು ಇಂಥ ಪ್ರಕರಣಗಳ ವಿಚಿತ್ರ ಪರಿಯನ್ನು, ಒಂದೇ ಜಿಲ್ಲೆಯಲ್ಲಿ ಪುನರಾವರ್ತನೆಯಾಗುವ ರೀತಿಯನ್ನು 'ಸತಿ'ಯಾದ ನಂತರ ಹುಟ್ಟಿಕೊಳ್ಳುವ 'ಸತಿ ಟ್ರಸ್ಟ್'ಗಳನ್ನು, ಅವುಗಳ ಹಣದ ವ್ಯವಹಾರಗಳನ್ನು ವರದಿ ಮಾಡಲು ಹೋಗಲಿಲ್ಲ. ಇಂಥಾ ನಿಜಾಂಶಗಳು ಮತ್ತೆ ಮತ್ತೆ ಈ ಬಗೆಯ ಅಮಾನವೀಯ ಅನಾಗರೀಕ ಪ್ರಕರಣಗಳು ಆಗದಂತೆ ತಡೆಯಬಲ್ಲದಿತ್ತು. ಎಸ್.ಎನ್.ಡಿ.ಟಿ. ಮಹಿಳಾ ವಿಶ್ವವಿದ್ಯಾಲಯ ೧೯೮೧

ರಲ್ಲಿ ಬರೆದ ಸಂಶೋಧನಾ ಪ್ರಬಂಧದಿಂದಷ್ಟೇ ಇಂಥಾ ಟ್ರಸ್ಟ್‌ಗಳಿಗೆ ಸರಕಾರದ ತೆರಿಗೆ ವಿನಾಯಿತಿಯೂ ಸಿಕ್ಕಿರುವುದು ತಿಳಿದು ಬಂದದ್ದು.

**'ಮಧ್ಯಮ ವರ್ಗದ ಸ್ತ್ರೀವಾದಿ ಬೇರು'ಗಳು :**

ಸ್ತ್ರೀವಾದಿಗಳು ಬಹಳಷ್ಟು ಬಾರಿ ಎದುರಿಸಬೇಕಾದ ಪ್ರಶ್ನೆ ಎಂದರೆ, ಭಾರತದಲ್ಲಿ ಸ್ತ್ರೀವಾದೀ ಚಳುವಳಿ ಕೇವಲ ಪಟ್ಟಣದ ಹೆಣ್ಣುಗಳ ವೈಯಕ್ತಿಕ ಅನುಕೂಲಗಳ ಎಲ್ಲೆಯೊಳಗೇ ನಿಂತಿದೆ. ನಿಜವಾಗಿ ಸಹಾಯ ಬೇಕಾದ ಮಹಿಳೆಯರಿಂದ ದೂರವಾಗಿದೆ ಎಂಬುದು. ಸ್ತ್ರೀವಾದ ಮಧ್ಯಮ ವರ್ಗದ ವಿದ್ಯಾವಂತ ಹೆಂಗಸರಿಗೆ ಬಹಳ ಸಹಜವಾಗಿ ಬರುತ್ತದೆ. ಕಾರಣ ಅವರು ತಮ್ಮ ವಿಚಾರಗಳನ್ನು ವಾಚ್ಯವಾಗಿಸುವ ಶಕ್ತಿಯುಳ್ಳವರು ಎಂಬ ನಂಬಿಕೆಯೂ ಇದೆ. ಆದರೆ ಆದರ್ಶಗಳನ್ನು ಹೊತ್ತ ಯುವಕರನ್ನು ವಿವಾಹವಾಗಿಯೂ, ಅಲ್ಲಿಯೂ ಮದುವೆಯ ಒಳಗೆ ಸಮಾನ ಪಾಲುದಾರಿಕೆ ಆಗದಿರುವುದನ್ನು ಕಾಣಬಹುದು. ಉದ್ಯೋಗಸ್ಥ ಮಹಿಳೆಯರು ಮಕ್ಕಳನ್ನು ಹೆರುತ್ತಾರೆ, ಅವಕ್ಕೆ ಸಂಪೂರ್ಣ ಜವಾಬ್ದಾರರಾಗುತ್ತಾರೆ. ಗಂಡನ ಮನೆಯವರು ಇವರು ತಂದು ಕೊಡುವ ಸಂಬಳವನ್ನು, ಉಡುಗೊರೆಗಳನ್ನು ಸ್ವಾಗತಿಸಿದರೂ ಸೊಸೆಯಿಂದ ತಮ್ಮ ಸೇವೆಯಲ್ಲಾಗುತ್ತಿರುವ ಕಡಿತಕ್ಕೆ ಗೊಣಗುಟ್ಟುತ್ತಾರೆ. ಮೂರು ಹೊತ್ತು ಭಾರತದ ಸ್ತ್ರೀವಾದ ಅಸಂಬದ್ಧ, ಅಪ್ರಸ್ತುತ ಆಗಿರಲು ಕಾರಣ, ಅದು ಬಡ ಶೋಷಿತ ಹಳ್ಳಿಗಳಲ್ಲಿಲ್ಲ ಎನ್ನುವವರು, ಉದ್ಯೋಗಸ್ಥ ಮಹಿಳೆಯರ ಅಸಹಾಯಕತೆಯನ್ನು, ಕೆಲಸದಲ್ಲಿರುವ ಗೃಹಿಣಿಯರನ್ನು, ಸ್ನಾತಕೋತ್ತರ ಪದವಿ ಪಡೆದು, ಡಾಕ್ಟರೇಟ್ ಡಿಗ್ರಿ ಪಡೆದಿದ್ದರೂ ಹೆಚ್ಚು ಸಂಖ್ಯೆಯಲ್ಲಿ ನಿರುದ್ಯೋಗಿಗಳಾದ ಮಧ್ಯಮ ವರ್ಗದ ಹೆಣ್ಣುಗಳನ್ನು ಗಮನಿಸಿಯೇ ಇಲ್ಲ.

**'ಚಿತ್ರರಂಗದಲ್ಲಿಯ ಮಹಿಳೆ' :**

೭೦ರ ದಶಕದವರೆಗೂನಮ್ಮ ಚಲನ ಚಿತ್ರಗಳು ಹೆಣ್ಣನ್ನು ಪ್ರೇಮದೇವತೆಯಾಗಿ ಚಿತ್ರಿಸಿದವು. ಪ್ರೇಮಿಗಳು ಪರಸ್ಪರ ಬಾಹುಗಳಲ್ಲಿ. 'ಪ್ರೀತಿಸಿದ ಮೇಲೆ ಜಗತ್ತಿನದೆಂಥಾ ಹೆದರಿಕೆ' ಎಂದು ಹಾಡಿ ಹೊರಟ ಕಾಲ, ಪ್ರೀತಿಗಾಗಿ ಬದುಕಿ ಪ್ರೀತಿಗಾಗಿ ಸತ್ತರು. ಅದೇ ೭೦ರ ದಶಕದ ನಂತರದಚಿತ್ರಗಳಲ್ಲಿ, ಪುರುಷನ ಹಿಂಸೆ, ಕ್ರೌರ್ಯ, ಆಕ್ರಮಣಶೀಲತೆಯೇ ಪೌರುಷದ ಚಿನ್ಹೆಯಾಗಿ, ಹೆಣ್ಣಿನ ಮೇಲೆ ಗಂಡಿನ ದಬ್ಬಾಳಿಕೆ ಪ್ರಮುಖವಾಗಿ ಚಿತ್ರಿತವಾಯಿತು. ನಾಯಕ 'ಕಾನೂನು–ವ್ಯವಸ್ಥೆ'ಗೆ ಎದುರುಬಿದ್ದು ನಿಲ್ಲುವ ಗಂಡುತನ, ಮಾನಭಂಗ ದೃಶ್ಯಗಳಲ್ಲಿ ಸೋತವಳನ್ನು ಗೆದ್ದವನನ್ನು ತೋರಿಸುವ ರೀತಿ, ಈ ಚಿತ್ರಗಳು ಗಂಡಿನ ಯಜಮಾನಿಕೆಯಲ್ಲಿ ಹೆಣ್ಣಿನ ನಿಷ್ಕ್ರಿಯ ಒಪ್ಪಿಸಿಕೊಳ್ಳುವಿಕೆಯಲ್ಲಿ ಯಾವ ಸಂಶಯವನ್ನೂ ಉಳಿಸುವುದಿಲ್ಲ. ಮೀನಾಕುಮಾರಿಯ ದುರಂತ ನಮ್ಮ ವಾಸ್ತವ ಸಮಾಜದಲ್ಲಿಯ ಆರ್ಥಿಕವಾಗಿ ಸ್ವತಂತ್ರರಿರುವ ಹೆಣ್ಣುಗಳ ಒಳ ಸಂಕಟಕ್ಕೆ ಅತಿ ಹತ್ತಿರವಾದದ್ದು. 'ಅಂಕುರ್' 'ಆಕ್ರೋಶ್'ಗಳಂಥಾ ಚಿತ್ರಗಳು ಕೂಡ ಹೆಣ್ಣಿನ ಮೇಲಿನ ನಮ್ಮ ಸಮಾಜದ ಶೋಷಣೆಗೆ ಪರಿಹಾರ ಹುಡುಕುವುದಿಲ್ಲ. ಚಿತ್ರ ತೋರುವ ಪರಿಹಾರಗಳು ಸಾರ್ವತ್ರಿಕ ದೆಡೆಗೆ ಮುಖಮಾಡುವುದಿಲ್ಲ, ಅತ್ಯಂತ ವೈಯುಕ್ತಿಕವಾಗಿ ಉಳಿಯುತ್ತವೆ. ನಾವು ಚಿತ್ರಗಳಲ್ಲಿ ಕಾಣಬಯಸುವುದು ನೀತಿ ರೀತಿಗಳ ಪಾಠ ಪ್ರವಚನವನ್ನಲ್ಲ, ಹೆಣ್ಣಿನ ಎಲ್ಲಾ ಮಾನಸಿಕ ಮುಖಗಳನ್ನು, ಆಕೆಯ ಹಿಂಜರಿಕೆ, ನಾಚಿಕೆ, ಆಕ್ರೋಶ, ಮುಜುಗರ, ಸೋಲು, ಗೆಲವು, ನೋವು, ನಲಿವು, ಗೊಂದಲ, ದಂಗೆ ಎಲ್ಲವನ್ನೂ ನೋಡಬಯಸುತ್ತೇವೆ. ಹೆಣ್ಣು ಎಂದಿಗೂ ಗಂಡಿಗಿಂತ ವಿಭಿನ್ನವಾಗಿಯೇ ಇರುತ್ತಾಳೆ. ಆಕೆಯ ಈ ವೈಶಿಷ್ಟ್ಯವನ್ನು ಚಿತ್ರಿಸದೆ, ನಮ್ಮ ಚಿತ್ರಗಳು ಕೇವಲ ಒಂದೇ ತರದ ಬೋರು ಹೊಡೆವ ಏಕತಾನದ ಪಾತ್ರಗಳಲ್ಲಿ ಮುಳುಗಿವೆ.

**ಮದುವೆಯೆಂಬ ಸಂತೆ :**

ಇಂದಿನ 'ಪಂಚತಾರಾ ವಿವಾಹ'ಗಳ ಸಂಪ್ರದಾಯದ ಗಂಟೆಗಟ್ಟಲೆ ಮಂತ್ರಗಳಿಲ್ಲ ನಿಜ, ಆದರೆ ವಧು–ವರ ವೀಡಿಯೋ ಕ್ಯಾಮರಾಗಳಿಗೆ ಪೋಸ್‌ಕೊಟ್ಟು ಕ್ಯಾಮರಾಮನ್ ಆದೇಶಕೊಟ್ಟಾಗ ಹಾರ ಹಾಕುತ್ತಾರೆ. ಹೆಣ್ಣು ಎಷ್ಟೇ ವಿದ್ಯಾವಂತಳಾಗಿದ್ದರೂ, ಪಾಶ್ಚಾತ್ಯರ ರೀತಿ ನೀತಿಗಳನ್ನು ಅನುಕರಿಸುವ ಕುಟುಂಬವಾದರೂ, ಇಂದಿಗೂ ಅಥರ್ವಣ ವೇದದ ಮಂತ್ರಗಳೊಡನೆ ಪುರೋಹಿತ ಕನ್ಯಾದಾನ ಮಾಡುತ್ತಾನೆ. ಹೆಣ್ಣಿನ ನಿಷ್ಕ್ರಿಯ ಹಾಗೂ ಜಡಸ್ಥಿತಿ ಮತ್ತೊಮ್ಮೆ ದೃಢೀಕರಿಸುತ್ತದೆ. 'ಇದೋ ನನ್ನ ಕನ್ಯಾ ಪುತ್ರಿಯನ್ನು', ನನ್ನ ಕೈಲಾದಷ್ಟು ಆಭರಣಗಳಿಂದ ಅಲಂಕರಿಸಿ ನಿನ್ನ ಕೈಗಿಡುತ್ತಿರುವೆ, ಸ್ವೀಕರಿಸು' ಎನ್ನುತ್ತಾನೆ. ಹೆಣ್ಣು ಹೆತ್ತ ತಂದೆ;

ಕನ್ಯಾದಾನ ಹೆಣ್ಣನ್ನು ಕೊಡು–ಕೊಳ್ಳುವ ವ್ಯಾಪಾರ. ಇಬ್ಬರು ಗಂಡಸರ ನಡುವೆ ನಡೆಯುವಂಥಾದ್ದು. ತಂದೆ ಕೊಡುತ್ತಾನೆ. ವರ ಸ್ವೀಕರಿಸುತ್ತಾನೆ. ಹುಡುಗಿಯ ಆಕ್ಷೇಪಣೆಗಳೆಲ್ಲ ಸಂಪ್ರದಾಯದ ಹೆಸರಿನಲ್ಲಿ ಉಸಿರಡಗಿ ಕುಳಿತುಕೊಳ್ಳುತ್ತವೆ, ಸಾಲದ್ದಕ್ಕೆ ತಂದೆ ಮನೆಯಿಂದ ಮಾವನ ಮನೆಗೆ ಹೋಗಬೇಕಾದದ್ದು ಇಂದಿಗೂ ಕಟು ವಾಸ್ತವ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು. ಆಕೆ ಹೊಸಿಲು ದಾಟಿದ ಮೇಲೆ ಹಿಂತಿರುಗುವಂತಿಲ್ಲ.

**ಭಾರತೀಯ ಕುಟುಂಬಗಳ ರಾಜಕೀಯ :**

ನಮ್ಮಲ್ಲಿ ಸಾಂಸಾರಿಕ ನಾಟಕಗಳು, ಧಾರವಾಹಿಗಳು, ಚಲನಚಿತ್ರಗಳು ಯಥೇಚ್ಛವಾಗಿದ್ದರೂ. ಭಾರತೀಯ ಕುಟುಂಬಗಳು ತಮ್ಮ ಬಗ್ಗೆ ತಿಳಿದಿರುವುದು ಅತ್ಯಲ್ಪ, ಜನ ಮಿಥ್ಯೆಯನ್ನೇ ನಂಬಲಿಚ್ಛಿಸುತ್ತಾರೆ. ಅದರಲ್ಲಿ ಮುಖ್ಯವಾದದ್ದು, ಮಡದಿ–ಮಾತೆ ಆಗುವುದೇ ಹೆಣ್ಣಿನ ಪರಮ ಗುರಿ ಎಂದು ಭಾವಿಸುವುದು. ಈ ಹಿನ್ನೆಲೆಯಲ್ಲಿ ಹೆಣ್ಣಿನ ದುಡಿಮೆ ಅತ್ಯಂತ ಸಂಕೀರ್ಣ ವಿಷಯವಾಗುತ್ತದೆ. ಪ್ರತಿ ಹೆಂಗಸೂ ದುಡಿಯುತ್ತಾಳೆ ಮನೆಯ ಒಳಗೆ, ಇಲ್ಲ ಹೊರಗೆ, ಕೆಲವೊಮ್ಮೆ ಎರಡೂ ಕಡೆಯೂ ದುಡಿಯುತ್ತಾಳೆ. ಆದರೆ ಓರ್ವ ದುಡಿವ ಗಂಡನಿಗೆ ನಮ್ಮ ಸಮಾಜದಲ್ಲಿ ದೊರೆಯುವ. ಸಹಾಯ, ಸಹಕಾರ. ದುಡಿದ ಮಹಿಳೆಗೆ ಗಂಡನಿಂದಾಗಲೀ, ಸಮಾಜದಿಂದಾಗಲೀ ದಕ್ಕುವುದಿಲ್ಲ. ಉದ್ಯೋಗಸ್ಥ ಮಹಿಳೆಯರೂ ಕೂಡಾ ಮನೆಯ ಹೊರಗಿನ ದುಡಿಮೆಯಷ್ಟೇ ಗಂಡಿನ ಪಾಲಿನದು ಎಂದು ನಂಬುವುದುಂಟು. ಕುಟುಂಬದೊಳಗೆ ಸಬಲರಿಂದ ದುರ್ಬಲರ ಪ್ರಜ್ಞಾಪೂರ್ವಕ ಶೋಷಣೆ ನಡೆಯುವುದರತ್ತ ನಮ್ಮ ಗಮನ ಹರಿಯಬೇಕಾಗಿದೆ. ಭಾರತೀಯರಿಗೆ ಹೆಣ್ಣು ಬಡವಳಾಗಿದ್ದರೆ, ಇಲ್ಲ ಪರಿಸ್ಥಿ–ತಿಯ ಒತ್ತಡವಿದ್ದರೆ ಮಾತ್ರ ಹೊರಗೆ ದುಡಿಯಬೇಕು. ಉಳಿದವರೆಲ್ಲ ಕೇವಲ ಖುಷಿಗೆ ಮೋಜಿಗೆ ತಾಯ್ತನದ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲೆಂದೇ ದುಡಿಯ್ಯ ಹೊರಟವರೆಂಬ ಗುಮಾನಿ, ಈ ಸಮಾಜಕ್ಕೆ. ದುಡಿವ ಮಹಿಳೆಯರೂ ಕೂಡಾ ಮದುವೆಯಾದೊಡನೆ, ಗಂಡ ಒಪ್ಪಿದರೆ, ಅತ್ತೆ ಮನೆಯವರು ಅನುಮತಿ ನೀಡಿದರೆ ಮಾತ್ರ ಕೆಲಸ ಮುಂದುವರೆಸುತ್ತೇವೆ ಅನ್ನುತ್ತಾರೆ. 'ನಾ ದುಡಿಯಲು ಇರುವ ಕಾರಣಗಳು, ಓರ್ವ ಗಂಡಿಗಿರುವ ಕಾರಣಗಳಿಗಿಂತ ಬೇರೆಯಲ್ಲ' ಎಂದು ಸಾರ್ವಜನಿಕವಾಗಿ ಒಪ್ಪಿಕೊಳ್ಳುವ ಮಹಿಳೆಯರು ಅಪರೂಪ. ಹೆಂಗಸರಲ್ಲಿ ಆತ್ಮವಿಶ್ವಾಸ ಇಲ್ಲದಿರುವುದನ್ನು ಗುರುತಿಸಿದಾಗ, ವಿಭಕ್ತ ಕುಟುಂಬಗಳಲ್ಲಿ ಉದ್ಯೋಗಸ್ಥ ಮಹಿಳೆ ಹೆಚ್ಚು ನಿರಾಳವಾಗಿರುವುದನ್ನು ಕಾಣಬಹುದು. ಗಂಡನೂ ಅಪಹಾಸ್ಯ ಮಾಡಬಹುದಾದ ತಂದೆ–ತಾಯಿ ಎದುರಿಗಿಲ್ಲದ ಕಾರಣ ಹೆಚ್ಚು ಸಹಕರಿಸುವುದೂ ಉಂಟು. ಆದರೆ ನಮ್ಮಲ್ಲಿ ಮಹಿಳೆಯ ದುಡಿವ ಕ್ಷೇತ್ರದಲ್ಲಿ ಮಕ್ಕಳನ್ನು ನೋಡಿಕೊಳ್ಳುವ ಕ್ರೆಷ್‌ಗಳು ಇಲ್ಲದಿರುವುದು ದೊಡ್ಡ ತೊಡಕಾಗಬಲ್ಲದು. ಮಕ್ಕಳ ಸಮಸ್ಯೆಗಳೆಲ್ಲ ಕೇವಲ ಮಹಿಳೆಯ ಸಮಸ್ಯೆಯೆಂದು ಪರಿಗಣಿಸಲ್ಪಡುತ್ತವೆ. ಹೆಣ್ಣಿನ ಅವಶ್ಯಕತೆಗಳು ಅಂದರೆ ಮಕ್ಕಳ ಕ್ರೆಷ್. ಹೆರಿಗೆ ರಜೆಯ ಅಗತ್ಯ ಗಂಡಿನದೂ ಆಗಬೇಕು. ಮನೆಯ–ಮಕ್ಕಳ ಹೊಣೆಗಾರಿಕೆಯಲ್ಲಿ ಆತನ ಪಾಲು ಇರಬೇಕು. ಮಹಿಳೆಯ ಅಧಿಕಾರ–ಯಶಸ್ಸಿನ ಕುರಿತಾದ ಭಯವನ್ನು, ಹಿಂದಿನಿಂದಲೂ ಸಾಗಿ ಬಂದ ಸಮಾಜದ ಪೂರ್ವಾಗ್ರಹ, ಲಿಂಗಭೇದದ ಫಲಿತಾಂಶವಾಗಿ ಕಾಣುವುದಿಲ್ಲ, ಅವಳೊಳಗಿನ ಪ್ರಕೃತಿ ಸಹಜಗುಣವೆಂಬಂತೆ ಅರ್ಥೈಸುತ್ತಾರೆ. ಈ ಧೋರಣೆ ಬದಲಾಯಿಸಬೇಕು ಹೆಂಗಸರೂ ತಮ್ಮ ಬದುಕನ್ನು ಸರಿಯಾಗಿ ಯೋಜಿಸಬೇಕು. ತಮ್ಮ ಸುರಕ್ಷಣೆಗೆ, ಯಶಸ್ಸಿಗೆ ಗಂಡಸರ ಮೇಲೆ ಅವಲಂಬಿಸಿರಬಾರದು. ನಮ್ಮ ಸಮಾಜದಲ್ಲಿ ಹೆಣ್ಣು ಯಾವಾಗಲು ಸೋಲುವತ್ತ, ತ್ಯಾಗ ಮಾಡುವತ್ತ ಇದ್ದರೇ ಅದು ಹೆಣ್ಣಿನ ಹೆಚ್ಚುಗಾರಿಕೆ ಎಂದು ಭಾವಿಸಲಾಗಿದೆ. ಹಾಗಿದ್ದರೆ ಮಾತ್ರ ಆಕೆಗೆ ಸಮಾಜದ ಅನುಕಂಪ ಬೆಂಬಲ ಸಿಗಬಲ್ಲದು. ಆದರೆ ಅದೇ ಕ್ರಿಯೆ ಆಕೆಯನ್ನು ಕಟ್ಟಿ ತಳಕ್ಕಂಟಿಸುತ್ತದೆ. ಯಶಸ್ವೀ ಮಹಿಳೆ ಏಕಾಂಗಿ ಇರಬಹುದು, ಆದರೆ ಆಕೆಗೆ ಗಂಡಿನ ಭಯವಿಲ್ಲ, ಆಕೆಯನ್ನು ಕಂಡರೇ ಪುರುಷರಿಗೇ ಭಯ, ಕಾರಣ ಆಕೆ ಅಧಿಕಾರದ ಲಾಭ–ನಷ್ಟಗಳನ್ನು ತಿಳಿದವಳು. ನಿಜ, ಯಶಸ್ಸಿನ ಶಿಖರದಲ್ಲಿ ಒಂಟಿತನವಿದೆ. ಆದರೆ ಇಲ್ಲಿ ತಳದಲ್ಲಿ ಅದನ್ನು ಮೀರಿಸಿದ ಏಕಾಂಗಿತನವಿದೆ.



ವ್ಯಕ್ತಿವಿಶೇಷ...

## ಬದುಕಿಗೆ ಒಲಿದ ಬರಹಗಾರ್ತಿ :

# ಬೆಳಗೆರೆ ಪಾರ್ವತಮ್ಮ

–ಛಾಯಾ ಬಬ್ಬರ್‌ಜಂಗ್

ಬೆಳಗೆರೆ ಪಾರ್ವತಮ್ಮ ಹುಟ್ಟಿದ್ದು ಚಳ್ಳಕೆರೆ ತಾಲ್ಲೂಕಿನ ಬೆಳಗೆರೆ ಗ್ರಾಮದಲ್ಲಿ. ತಂದೆ ಚಂದ್ರಶೇಖರ ಶಾಸ್ತ್ರಿಗಳು ಲಾವಣಿಯಲ್ಲಿ ಗಟ್ಟಿಗರು. ಕಂಚಿಯಲ್ಲಿ ವೇದಾಧ್ಯಯನ ಮಾಡಿದ್ದ ಪಂಡಿತರಾಗಿದ್ದರೂ ಮನೆತನದ ಪೌರೋಹಿತ್ಯ ಪ್ರವೃತ್ತಿಯನ್ನು ತಮ್ಮನಿಗೆ ವಹಿಸಿ, ಕವನ ಕಟ್ಟುತ್ತ ಊರೂರು ಅಲೆವ ಸ್ವತಂತ್ರ ಮನೋಧರ್ಮದ ಸಾಹಿತ್ಯ ಪ್ರಿಯರು. ತಂದೆಯ ಈ ಸಾಂಸಾರಿಕ ನಿರ್ಲಿಪ್ತತೆಯನ್ನು ತಾಯಿ ಅನ್ನಪೂರ್ಣಮ್ಮ ತಮ್ಮ ವ್ಯಾವಹಾರಿಕ ಚತುರತೆಯಿಂದ ಬೇಸಾಯದ ದುಡಿಮೆಯಿಂದ ಸರಿದೂಗಿಸಿದ ಮಹಾತಾಯಿ. ಈ ದಂಪತಿಗಳ ಐದನೆಯ ಕೂಸಾದ ಪಾರ್ವತಮ್ಮನವರ ಒಡಹುಟ್ಟಿದವರಲ್ಲಿ ಮೂರು ಜನ ಕನ್ನಡ ನಾಡಿಗೆ ಸುಪರಿಚಿತರು. ಅಕ್ಕ ಜಾನಕಮ್ಮ ಹುಟ್ಟು ಕವಿಯತ್ರಿ. ತಮ್ಮ ಸಹಜ ಕಾವ್ಯ ಪ್ರತಿಭೆಯಿಂದ ಬೇಂದ್ರೆಯವರೇ ಮೊದಲಾದ ನವೋದಯದ ಮಹತ್ವದ ಸಾಹಿತಿಗಳ ಪ್ರಶಂಸೆಗೆ ಪಾತ್ರರಾದವರು. ಒಬ್ಬ ಅಣ್ಣ ಕ್ಷೀರಸಾಗರ-ಕವಿತೆ, ನಾಟಕಗಳಿಂದ ಹೆಸರಾಂತರಾದರು. ಇನ್ನೊಬ್ಬ ಅಣ್ಣ ಕೃಷ್ಣಶಾಸ್ತ್ರಿಗಳು 'ಬೆಳಗೆರೆ ಗಾಂಧಿ' ಎಂದು ಈಗಲೂ ಪ್ರಸಿದ್ಧರಾಗಿರುವ ಗಾಂಧಿವಾದಿ. ಇನ್ನೊಬ್ಬ ಅಕ್ಕ ರುಕ್ಕಮ್ಮ ಅನುಕೂಲ ದಾಂಪತ್ಯನಡೆಸಿದ ಗೃಹಿಣಿ.

ಈ ಸುಸಂಸ್ಕೃತ ವಾತಾವರಣದಲ್ಲಿ ಹುಟ್ಟಿದ ಪಾರ್ವತಮ್ಮ ಬೆಳಗೆರೆಯ ಶಾಲೆಯಲ್ಲಿ ಐದನೆಯ ಇಯತ್ತೆಯವರೆಗೆ ಓದಿದರು ಅಷ್ಟೆ. ಸಂಪ್ರದಾಯಸ್ಥ ಕುಟುಂಬವಾದುದರಿಂದ ಮುಂದೆ ಓದಲು ಆಗಲಿಲ್ಲ. ಅಕ್ಕನ ಜೊತೆ ಪದ್ಯಗಳನ್ನು ಹಾಡುವುದು, ಮನೆಗೆ ಬಂದ ಅತಿಥಿಗಳಿಗೆ ಉಪಚಾರ ಮಾಡುವುದು. ಪಾರ್ವತಮ್ಮನವರ ಕೆಲಸವಾಗಿತ್ತು. ಹನ್ನೆರಡನೆಯ ವಯಸ್ಸಿನಲ್ಲೇ ಇವರ ಮದುವೆಗೆ ಪ್ರಯತ್ನಪಟ್ಟ ತಂದೆ ತಾಯಿಗಳು ಬಡತನದಿಂದಾಗಿ ಹಾನಗಲ್ಲಿನ ವರನಿಗೆ ನಾಲ್ಕನೆಯ ಸಂಬಂಧವಾಗಿ ಮಗಳ ಮದುವೆ ಮಾಡಿದರು. ಅನಾರೋಗ್ಯದಿಂದ ನರಳುವ ಪತಿ ಬೆಳೆದ ಮಲಮಕ್ಕಳ ನಡುವೆ ಪಾರ್ವತಮ್ಮನವರ ದಾಂಪತ್ಯ ಜೀವನ ಕಡು ಕಷ್ಟದ್ದಾಯಿತು. ಮಲ ಮಕ್ಕಳು ಹೊರದೂಡಿದರೂ ನಿತ್ರಾಣದ ಗಂಡನಿಗೆ ಏನೂ ಮಾಡಲಾಗಲಿಲ್ಲ. ಮಗಳ ಈ ಪಾಡಿಗಾಗಿ ಬಹುವಾಗಿ ಚಿಂತಿಸಿ ವ್ಯಥೆ ಪಟ್ಟ ಚಂದ್ರಶೇಖರ ಶಾಸ್ತ್ರಿಗಳು ತಮ್ಮ ಮಕ್ಕಳೆಲ್ಲರೊಂದಿಗೆ ಸಮಾಲೋಚನೆ ನಡೆಸಿದರು. ಹಿಂದೂಪುರದ ಬಳಿ ಕುಂಬಳಿ ಲಿಂಗಣ್ಣನವರೆಂಬ ಗಾಂಧಿವಾದಿಗಳು ಸ್ಥಾಪಿಸಿದ್ದ ಸೇವಾ ಮಂದಿರಕ್ಕೆ ನೆಲೆ ತಪ್ಪಿದ ಸೋದರಿಯನ್ನು ಕೃಷ್ಣಶಾಸ್ತ್ರಿಗಳು ಸೇರಿಸಿದರು. ಆ ಸೇವಾ ಮಂದಿರದಲ್ಲಿ ಪಾರ್ವತಮ್ಮ ಮಾಧ್ಯಮಿಕ ಶಾಲಾ ವಿದ್ಯಾಭ್ಯಾಸ ಪೂರೈಸಿದರು. ರಾಜಾಜಿ, ವಲ್ಲಭಭಾಯಿ ಪಟೇಲ್, ಬಜಾಜ್ ಮುಂತಾದ ರಾಷ್ಟ್ರೀಯ ಪ್ರಮುಖರ ಉಪನ್ಯಾಸಗಳನ್ನು ಕೇಳುವ ಅವಕಾಶ ಪಾರ್ವತಮ್ಮನವರಿಗೆ ದೊರೆಯಿತು. ಅಲ್ಲೇ ಹೊಲಿಗೆ, ಹಾಡು, ತೋಟಗಾರಿಕೆ ಮುಂತಾದವುಗಳನ್ನೂ ಅವರು ಕಲಿತರು. ಆ ಸಮಯದಿಂದಲೇ ಗಾಂಧಿಯವರ ವಿಚಾರಗಳಿಂದ ತುಂಬಾ ಪ್ರಭಾವಿತರಾಗಿದ್ದರು. ಆಶ್ರಮದ ಈ ಪರಿಸರದಲ್ಲಿ ತಮ್ಮ ದುಃಖ ಮರೆಯುವಲ್ಲಿ ಅಕ್ಕ ಜಾನಕಮ್ಮ ಪಾರ್ವತಮ್ಮನವರಿಗೆ ಒತ್ತಾಸೆಯಾಗಿ ನಿಂತರು.

ಈ ಸೇವಾ ಮಂದಿರದ ಕಲಿಕೆಯ ನಂತರ ಪಾರ್ವತಮ್ಮ ಜಾನಕಮ್ಮನವರ ಮನೆಯಲ್ಲಿ ಬಳ್ಳಾರಿಯಲ್ಲಿ ಉಳಿದರು. ಖಾಸಗಿಯಾಗಿ ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಕುಳಿತು ಪಾಸುಮಾಡಿ, ಹಿಂದಿಯಲ್ಲಿ ವಿಶಾರದ, ಪ್ರವೀಣ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ಅಕ್ಕನ ಮನೆಯಲ್ಲಿ ಇದ್ದ ಸಾಹಿತ್ಯದ ವಾತಾವರಣದಲ್ಲಿ ಅವರ ಪ್ರತಿಭೆ ಅರಳಿತು. ಅಕ್ಕ-ಭಾವನ ಸಲಹೆಯಂತೆ 1948 ರಲ್ಲಿ ಟಿ.ಸಿ.ಎಚ್.ಗೆ ಸೇರಿದರು. ನಲವತ್ತೊಂಭತ್ತರಲ್ಲಿ ಜಾನಕಮ್ಮ ತೀರಿಕೊಂಡದ್ದು ಒಂದು ದೊಡ್ಡ ಆಘಾತ. 1950ರಲ್ಲಿ ಟಿ.ಸಿ.ಎಚ್ ಮುಗಿಸಿ ಬಳ್ಳಾರಿಯ ಹಿರಿಯ ಸೊಗಮ್ಮ ಮಾಧ್ಯಮಿಕ ಶಾಲೆಯಲ್ಲಿ ಉಪಾಧ್ಯಾಯಿನಿಯಾಗಿ, ಜಾನಕಮ್ಮನವರ ಮನೆಯ ಜವಾಬ್ದಾರಿಯನ್ನೂ ಹೊತ್ತರು. ಅಕ್ಕನಿಂದಲೇ

ಪ್ರೇರಣೆ ಪಡೆದ ಅವರು ಕಥೆ, ಕವನಗಳನ್ನು ಬರೆಯುತ್ತೊಡಗಿದ್ದರು. ಅಣ್ಣ ಕೃಷ್ಣಶಾಸ್ತ್ರಿಗಳ ಒತ್ತಾಯದಿಂದ 195? ರಲ್ಲಿ ಮತ್ತೆ ಪತಿಯ ಮನೆಗೆ ಹಾನಗಲ್‌ಗೆ ಹೋದರು. ಪಾರ್ವತಮ್ಮನವರ ವಿದ್ಯೆ, ಕೆಲಸ ಗಳಿಕೆಗಳಿಂದಾಗಿ ಪತಿ ಮತ್ತು ಮಲಮಕ್ಕಳು ಈಗ ಅವರನ್ನು ಆದರಿಸಿದರು. ಆ ಮನೆಗೆ ಹೋಗಿ ಬರುವಷ್ಟು ಸಂಬಂಧ ಈಗ ಬೆಳೆದಿತ್ತು. ನಂತರದ ವರ್ಷಗಳಲ್ಲಿ ಪಾರ್ವತಮ್ಮನವರಿಗೆ ಹುಟ್ಟಿದ ಮಗು ರವಿ, ಅವರ ಪ್ರೀತ್ಯಾದರಗಳೆಲ್ಲದರ ವಾರಸುದಾರ, ಇಂದು ಲೇಖಕ ಪತ್ರಕರ್ತರಾಗಿ ಹೆಸರು ಪಡೆದಿರುವ ರವಿ ಬೆಳಗೆರೆ.

ರವಿ ಹುಟ್ಟಿದ ಅವಧಿಯಲ್ಲೇ, ಅಂದರೆ 1957 -58 ರಲ್ಲಿ ಬೇಂದ್ರೆಯವರು ಬಳ್ಳಾರಿಗೆ ಜಾನಕಮ್ಮನ ಮನೆ ನೋಡಲು ಧಾರವಾಡದಿಂದ ಬಂದಿದ್ದರು. ಆಗ ಗತಿಸಿದ ಜಾನಕಮ್ಮನವರ 'ಕಲ್ಯಾಣ' ಕವನ ಸಂಕಲನ ಎಲ್ಲರೂ ಸ್ಮರಿಸಿಕೊಳ್ಳುವ ಹೊತ್ತಿನಲ್ಲಿ ಪಾರ್ವತಮ್ಮ ತಮ್ಮ ಕವನಗಳನ್ನು ಹಾಡಿದ್ದು ಬೇಂದ್ರೆಯವರ ಮನಸೆಳೆಯಿತು. ಇವರದೂ ಕವನ ಸಂಕಲನ ಹೊರತರುವ ಬಗ್ಗೆ ಬೇಂದ್ರೆ ಪ್ರೋತ್ಸಾಹಿಸಿದರು. ಅರವತ್ತರ ದಶಕದಲ್ಲಿ ಹೈದರಾಬಾದ್‌ನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಆಹ್ವಾನಿತರಾಗಿ ಹೋಗಿ ಕವನ ವಾಚಿಸಿದ್ದ ಪಾರ್ವತಮ್ಮನವರ ಮೊದಲ ಕವನ ಸಂಕಲನ 'ಹೂ ಗೊಂಚಲು' 1970 ರಲ್ಲಿ ಪ್ರಕಟವಾಯಿತು. ನಂತರ "ಮೂರು ದೀಪಾವಳಿ" ಎಂಬ ಕಾದಂಬರಿಯನ್ನು 1972ರಲ್ಲೂ, "ಪದರುಗಳು" ಎಂಬ ಕಥಾಸಂಕಲನವನ್ನು 1979 ರಲ್ಲೂ ರಚಿಸಿದರು. ಸಾಹಿತ್ಯರಚನೆಗೆ ಬೆಳಗೆರೆ ಪಾರ್ವತಮ್ಮನವರಿಗೆ ವಿಶೇಷ ಪ್ರೋತ್ಸಾಹ ನೀಡಿದ ಮಹನೀಯರಲ್ಲಿ ಬೀಚಿಯವರು ಪ್ರಮುಖರು, ತೊಗರಿ ಸರ್ವಮಂಗಳಮ್ಮ, ಓಬಳಮ್ಮ, ಯಜಮಾನ ಶಾಂತರುದ್ರಪ್ಪ ಮೊದಲಾದ ಸಾಹಿತ್ಯಾಭಿಮಾನಿಗಳು ಪಾರ್ವತಮ್ಮನವರ ಪುಸ್ತಕ ಪ್ರಕಟಣೆಗೆ ನೆರವಾದರು. ತೊಗರಿ ಸರ್ವಮಂಗಳಮ್ಮ, ಮತ್ತು ಲೋಕಾಂಬ ಪಾರ್ವತಮ್ಮನವರ ಗೆಳತಿಯರಾದರು. ಆಂಧ್ರದ ಕವಿ ರಾಪಾಡ ವೆಂಕಟರಾಮ ಶಾಸ್ತ್ರಿಗಳು, ಸಂಜೀವಮೂರ್ತಿರಾವ್, ಭಾಸ್ಕರಪಂಥ ರಾಮಚಂದ್ರ ಸ್ವಾಮಿಗಳು ಮುಂತಾದವರು ಪಾರ್ವತಮ್ಮನವರ ಕವನಗಳನ್ನು ಕೇಳಿ, ಮೆಚ್ಚಿ ಪ್ರೋತ್ಸಾಹಿಸಿದರು.

1970ರಲ್ಲಿ ಪಾರ್ಶ್ವವಾಯು ಆಘಾತಕ್ಕೊಳಗಾದ ಪಾರ್ವತಮ್ಮನವರು ತಮ್ಮ ಅಣ್ಣ ಕೃಷ್ಣಶಾಸ್ತ್ರಿಗಳ ನೆರವಿನಿಂದ ಬಳ್ಳಾರಿ, ಮೈಸೂರುಗಳ ಆಸ್ಪತ್ರೆಗಳಲ್ಲಿ ಚಿಕಿತ್ಸೆಪಡೆದರೂ ಗುಣವಾಗದೆ ಹೋಗದೆ ಆಯುರ್ವೇದ ಚಿಕಿತ್ಸೆಯಿಂದ ಸ್ವಲ್ಪ ಗುಣವಾದಾಗ, ಶಾಲೆಯ ಕೆಲಸವನ್ನೂ ಮುಂದುವರೆಸಿದರು. ಆ ಅವಧಿಯಲ್ಲೇ "ಪದರುಗಳು" ಕಥಾಸಂಕಲನವನ್ನು ಪ್ರಕಟಿಸಿ ಕೃಷ್ಣಮೂರ್ತಿಪುರಾಣಿಕರಿಂದ ಸನ್ಮಾನಿಸಿಕೊಳ್ಳುವ ಭಾಗ್ಯ ಅವರದಾಯಿತು. ಕನ್ನಡಸಾಹಿತ್ಯ ಪರಿಷತ್ತಿನ ಸದಸ್ಯೆಯಾಗಿದ್ದ ಪಾರ್ವತಮ್ಮನವರು ಬಳ್ಳಾರಿಯ ಸಾಹಿತ್ಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಕೊನೆಯದಿನಗಳಲ್ಲಿ ಮಗನ ಕುಟುಂಬದೊಂದಿಗೆ ಒಡಃಕಿದ್ದ ಆಕೆ 1987ರ ಸೆಪ್ಟೆಂಬರ್‌ನಲ್ಲಿ ಬಳ್ಳಾರಿಯ ಮೆಡಿಕಲ್ ಕಾಲೇಜು ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದರು.

ಭಾವನಾಜೀವಿ, ಉದಾರ ಮನೋಧರ್ಮದ ಪಾರ್ವತಮ್ಮ ತಮಗಾದ ನೋವು, ಕಷ್ಟಗಳನ್ನು ಬದಿಗೊತ್ತಿ, ಓದಿ, ಬರೆದು, ಹಾಡುವ ಪ್ರವೃತ್ತಿಯನ್ನು ಬೆಳೆಸಿಕೊಂಡು ತಮ್ಮ ಬದುಕಿನ ಅನುಭವವನ್ನು ಬರಹದಲ್ಲಿ ಹೊರಹಾಕಿದ್ದಾರೆ. ದೇವರ ಪೂಜೆ, ದೇವರನಾಮ, ಗುಡಿಗಳಲ್ಲಿ ವ್ಯಕ್ತಿಗತ ಶ್ರದ್ಧೆಯಿದ್ದರೂ ಜಾತಿ-ಮತಗಳ ಸಂಕುಚಿತತೆ ಅವರದಾಗಿರಲಿಲ್ಲ. 'ಜಾತಿ-ಮತ ನಾವು ಮಾಡಿಕೊಂಡ ನಂಬಿಕೆಗಳು ನಮ್ಮೆಲ್ಲರ ದೇಹದಲ್ಲಿ ಹರಿಯುವುದು ಒಂದೇ ರಕ್ತ' ಎಂಬುದು ಅವರ ದೃಷ್ಟಿ.

'ಲಂಚ ಕೋರರು ಎಂದು ಜರಿಯುವರು
ಜನರನ್ನು ಉಂಟೆ ಬಗೆ ನಿನಗೆ ಸಮವೂ
ವಂಚಿಸಿದೆ ಬಹುವಿಧದಿ –ಹಿರಿಯ ವಂಚಕ
ನೀನು ಲಂಚವೆನಿತುಂಟೋ ವಂಚಕಾಗ್ರಣಿಯೇ॥'

ಎಂದು ಒಂದು ಕವನದಲ್ಲಿ ದೇವರನ್ನು, ಲಂಚಕೋರನನ್ನು ಈಕೆ ಮತ್ತೊಂದು ಪದ್ಯದಲ್ಲಿ,

ತಂದೆ ತಾಯ್ಗಳು ನನ್ನ
ಮಾರಿದರೆ ಕಟುಕನಿಗೆ
ನಂಬಿ ಕೈ ಹಿಡಿದವನು
ನೂಕಿದನೆ ಸುಖಪಡೆದು

ಎಂದು ಆಳವಾದ ನೋವು ಹೊರಗೆಡಹಿದ್ದಾರೆ. ಪ್ರಕೃತಿ ಪ್ರಿಯೆಯಾದ ಪಾರ್ವತಮ್ಮ ಸಂಜೆ, ಬೆಳಗು, ಮೋಡ, ಆಗಸ, ಸೂರ್ಯ ಚಂದ್ರರ ದಿಟ್ಟಿಸುತ್ತ ಹಾಡುತ್ತ ತಮ್ಮ ತಾವು ಮರೆಯುವ ಭಾವಜೀವಿ.

# ಪಾರ್ವತಮ್ಮನವರ ಬರಹ-ಒಂದು ಕಿರುನೋಟ

....ಪಾರ್ವತಮ್ಮನನ್ನು ನಾನು ಮೊದಲು ನೋಡಿದ್ದು ಬಳ್ಳಾರಿಯ ಸತ್ಯನಾರಾಯಣ ಪೇಟೆಯ ಮನೆಯಲ್ಲಿ. ಅವರ ಮಗ ರವಿ ಬೆಳಗೆರೆ ಆಗ 'ಬಳ್ಳಾರಿ ಪತ್ರಿಕೆ' ಯನ್ನು ಹೊರಡಿಸುತ್ತಿದ್ದರು. ನಾನು ನನ್ನ ಲೇಖನವನ್ನು ಅವರಿಗೆ ಕೊಡಬೇಕಾಗಿತ್ತು, ಆ ಸಂದರ್ಭದಲ್ಲಿ ಅವರನ್ನು ಕಾಣಲು ಹೋಗಿದ್ದೆ. ಆದರೆ ರವಿಬೆಳಗೆರೆ ಮನೆಯಲ್ಲಿ ಇರಲಿಲ್ಲ. ಆದುದರಿಂದ ಬೇಸರವಾಯಿತು. ಬಳ್ಳಾರಿಯ ಮಧ್ಯಾಹ್ನ ಕಾಲ, ಬಿಸಿಲಿನಿಂದ ತಲೆ ಸಿಡಿಯುತ್ತಿತ್ತು. ಅವರ ಬಾಗಿಲಲ್ಲಿ ಸ್ವಲ್ಪ ಹೊತ್ತು ಕುಳಿತುಕೊಂಡೆ. ಒಳಗಡೆ ಕುಳಿತಿರುವ ಅರವತ್ತು ವಯಸ್ಸಿನ ವೃದ್ಧೆ ನನ್ನ ಅವಸ್ಥೆ ಕಂಡು ಮರುಕಗೊಂಡು 'ಬಾ ಮಗು ಒಳಗೆ. ಸ್ವಲ್ಪ ನೀರು ಕುಡಿ ಸುಧಾರಿಸಿಕೋ' ಎಂದರು. ಆ ತಂಪೆರೆಯುವ ನುಡಿಗಳನ್ನು ಕೇಳಿ ಬಹಳ ಆನಂದವಾಯಿತು. ಒಳಗಡೆ ಹೋದೆ, ಆಕೆ ಕುಳಿತುಕೊಳ್ಳಲು ಹೇಳಿ ತನ್ನ ಬದಿಗಿರುವ ನೀರು ಕೊಟ್ಟರು. ನಾನು ಅವರನ್ನು ಗಮನಿಸಿದೆ ಪಾರ್ಶ್ವವಾಯು ಪೀಡಿತರೆಂದು ತಿಳಿಯಿತು. ನಂತರ ಆಕೆ ಬೆಳಗೆರೆ ಪಾರ್ವತಮ್ಮ ರವಿಯ ತಾಯಿ ಎಂದು ತಿಳಿಯಿತು.....ಅವರೊಡನೆ ಮಾತನಾಡಲು ಕುಳಿತೆ. ಅವರ ಮಾತಿನಲ್ಲಿ ಕವನ, ಹಾಡು, ಸಾಹಿತ್ಯ, ಕವಿಗಳು ಇವರೆಲ್ಲರ ವಿಷಯ ಹೊರ ಬಿದ್ದಿತ್ತು. ಅವರ ಮಾತುಗಳು.... ಆ ಭಾವಗಳು ಸುಂದರಮುಖ ಸ್ನೇಹ.... ತುಂಬಿದ ನಗೆ ನನ್ನನ್ನು ಅವರತ್ತ ಸೆಳೆದವು. ಹಾಗೆ ಅವರ ಪರಿಚಯ ಬೆಳೆಯಿತು. ಅವರ ಮನೆಗೆ ದಿನ ಬಿಟ್ಟು ದಿನ ಹೋಗುವ ಗೆಳತಿಯಾದೆ ಎನ್ನುವ ಶ್ರೀಮತಿ ಛಾಯಾ ಬಬ್ಬರ್‌ಜಂಗ್, ಒಬ್ಬ ಪಾರ್ವತಮ್ಮನವರನ್ನು ಒಬ್ಬ ಕಿರಿಯ ಗೆಳತಿಯಾಗಿ ಬಹಳ ನಿಕಟವಾಗಿ ಕಂಡು ಕಾಣಿಸಲು ಯತ್ನಿಸಿದ್ದಾರೆ. ಅವರ ಲೇಖನದ ಸಾರವನ್ನು ಇಲ್ಲಿ ನೀಡಿದ್ದೇವೆ. — ಸಂ.

'ಹೂಗೊಂಚಲು' (ಕವನ ಸಂಕಲನ1970,1986) ಪಾರ್ವತಮ್ಮನವರ ಮೊದಲ ಕೃತಿ. ನಲವತ್ತೇಳು ಕವಿತೆಗಳಿರುವ ಈ ಕೃತಿಯಲ್ಲಿ ಹಲವಾರು ಕವಿತೆಗಳಿಗೆ ಲೇಖಕಿ ರಾಗ, ತಾಳಗಳನ್ನೂ ಹಾಡುಗಾರ್ತಿಯಾಗಿ ಸ್ವತಃ ಇವುಗಳನ್ನು ಅವರು ಹಾಡುತ್ತಿದ್ದುದನ್ನು ವ್ಯಕ್ತಪಡಿಸುವಂತಿದೆ. ಈ ಕವಿತೆಗಳು ಇವರ ಅಕ್ಕ ಜಾನಕಮ್ಮನವರ ಕವನಗಳಿಗಿಂತ ಸರಳ. ನೇರ ಇಲ್ಲಿನ ವಸ್ತುಗಳಲ್ಲಿ ಮುಖ್ಯವಾಗಿ ಹೆಣ್ಣಿನ ಅನುಭವದ ನೋವಿ ಸಂಶಗಳು ಮತ್ತು ಲೇಖಕಿಯ ದೈವಶ್ರದ್ಧೆ ಎದ್ದು ತೋರುತ್ತವೆ. ಬರೆಯುವ ಕಾಯಕಕೂಡ ಇಲ್ಲಿ ಶಿವನ ಮೆಚ್ಚಿಸುವ, ಆರಾಧಿಸುವ ಕ್ರಿಯೆಯಂತೆ ಎಂಬುದನ್ನು ಈ ಸಾಲುಗಳು ಸೂಚಿಸುತ್ತವೆ.

ಅಚ್ಚ ಬಂಗಾರದೊಳು । ಪಚ್ಚೆ ಮಾಡುವ ತೆರದಿ ।
ಉಚ್ಚ ಭಾವಗಳಿಟ್ಟು। ಮತಿಯೊಳಗೆ ಅವನ ಗುಡಿ ।
ಮೆಚ್ಚುವಂದದಿ ಕಟ್ಟು । ಜಾಣ ಮನವೇ॥

(ಪುಟ ಬಿಚ್ಚುವ ಮುನ್ನ)

ಕವನಗಳ ಕಡೆಯಲ್ಲಿ 'ಜನಕಜೆಯ ಭಗಿನಿ'ಎಂಬ ಅಂಕಿತವನ್ನು ಬಳಸಿದ್ದಾರೆ. ಸುತ್ತಲಿನ ಬದುಕಲ್ಲಿ ತುಂಬಿರುವ ವಿಷಮತೆಗಳತ್ತ, ವಿಸ್ಮಯ, ಮರುಕ, ವ್ಯಂಗದನೋಟ ಹರಿಸುವ ಯತ್ನ 'ಲಂಚಕೋರ', 'ಕಗ್ಗಂಟಿನೊಗಟು' 'ಸಂಗಾತಿ' ಮುಂತಾದ ಕವನಗಳಲ್ಲಿದೆ. ಆದರೆ ಈ ವಿಷಮತೆಯ ಮೂಲವನ್ನು ಅರಸಿ ಹೊರಡುವ ಪ್ರಬುದ್ಧ ಅರಿವಿಗೆ ಬದಲಾಗಿ ಲೇಖಕಿ ಮುಗ್ಧ ಭಕ್ತೆಯಾಗಿ 'ದೇವರಲೀಲೆ' ಗಳಾಗಿ ಇವನ್ನು ಕಂಡು ನಿಟ್ಟುಸಿರಿಡುವಷ್ಟೆ ಚಿಂತನೆಗಳ ವ್ಯಾಪ್ತಿ ಸೀಮಿತವಾಗುತ್ತದೆ.

ಇಡೀ ಸಂಕಲನದಲ್ಲಿ ಗಮನ ಸೆಳೆವ ಒಂದು ಕವನ 'ಸಮಾಧಾನ' ಮಗು, ಬಾಲೆ, ಯುವತಿ, ಮಾತೆಯ ಹಂತಗಳಲ್ಲಿ ಹೆಣ್ಣಿನ ಬದುಕಿನ ಪರಹನ್ನು ಕಾಣಿಸುವ ಯತ್ನ ಈ ಪದ್ಯದಲ್ಲಿದೆ. ಈ ಎಲ್ಲ ಹಂತಗಳು 'ಏಕಳುವೆ ಎಲೆ' ಒಂದೇ ಪ್ರಶ್ನೆಯಾಗಿ ಮಗುವೆ, ಬಾಲೆ, ಯುವತಿ, ತಾಯೆ' ಎಂಬ ಸಂಬೋಧನೆಗಳೊಂದಿಗೆ ಜೋಡಿಸಿಕೊಳ್ಳುತ್ತದೆ. ಬಣ್ಣದ ಮನೆ, ಗಿಲಿಗಂಚಿ, ಕರ್ಪೂರದ ಗೊಂಬೆಯ ಮುರಿತದಿಂದ ಹಿಡಿದು ಅಳುವಿನ ಕಾರಣಗಳು

ಬದಲಾಗುತ್ತ ಬೆಳೆಯುತ್ತ ಸಾಗುತ್ತವೆ. 'ಚೆಂದುಳ್ಳ ಆಭರಣ ಗೆಳೆಯರ ಸಮನಾಗಿ ಇಲ್ಲೆಂದು' ಅಳುವ ಬಾಲೆಯನ್ನು ಕುರಿತ ಪ್ರಶ್ನೆ 'ಯುವತಿ'ಯ ಹಂತಕ್ಕೆ ಏರಿದಾಗ 'ತಂದೆ ತಾಯ್ಗಳು ನಿನ್ನ/ಮಾರಿದರೆ ಕಟುಕನಿಗೆ/ಸಂಬಿಕ್ಕೆ ಹಿಡಿದವನು/ ನೂಕಿದನೆ ಸುಖಪಡದು' ಎಂಬ ಪ್ರಶ್ನೆಯಾಗುತ್ತದೆ. ತಾಯಿಯಾದ ಅದೇ ಹೆಣ್ಣಿಗೆ 'ಹೆತ್ತು ಸಲಹಿದ ಮಗನು / ತೊತ್ತೆಂದು ಜರಿದನೆ / ಮುತ್ತೆಂದು ತಂದ ಸೊಸೆ / ಕತ್ತಿಡಿದು ತಳ್ಳಿದಳೆ' ಎಂದು ನಿರಾಶ್ರಿತ ಸ್ಥಿತಿಯನ್ನು ಧ್ವನಿಸುತ್ತದೆ. ಮೊದಲ ಎಲ್ಲ ಹಂತಗಳಲ್ಲಿ ಬರಲಿರುವ 'ನಾಳೆ'ಯ ಅಂದದ ಕನಸ್ಸನ್ನು ಸಮಾಧಾನವಾಗಿ ಒಡ್ಡುವ ಲೇಖಕಿ ಮುದಿ ತಾಯಿಗೆ 'ಹಿಂದೆ ಕಳೆದಷ್ಟು ದಿನ / ಮುಂದೆ ಬಾಳುವುದಿಲ್ಲ' ಎಂಬುದನ್ನೇ 'ಸಮಾಧಾನ'ವಾಗಿ ಒಡ್ಡಿರುವುದರ ಹಿಂದಿರುವ ವ್ಯಂಗ್ಯ ಗಮನಾರ್ಹ.

" ಮೂರು ದೀಪಾವಳಿ " ಪಾರ್ವತಮ್ಮನವರ ಎರಡನೆಯ ಕೃತಿ ಹಾಗೂ ಕಾದಂಬರಿ. ಒಂದು ಸಂಪ್ರದಾಯಸ್ಥ ಮನೆತನದ ಎಳೆ ವಯಸ್ಸಿನಲ್ಲೆ ವಿಧವೆಯಾಗಿ ಜಗತ್ತಿನ ಅನುಭವಗಳಿಗೆ ಬದುಕು ಒಡ್ಡಲ್ಪಟ್ಟಾಗ ಎದುರಾಗುವ ಬವಣೆಗಳ ಚಿತ್ರಣ ಇದರಲ್ಲಿದೆ. ಕೃತಿ ರಚನೆಯಾದ ನಂತರ, 1972ರಲ್ಲಿ ಇದು ಬೆಳಕು ಕಂಡಿದೆ. ಕಥೆಯಲ್ಲಿ ವಾಸ್ತವ ವಿವರಗಳಿಂದ ಅದನ್ನು ಸಂಭಾವ್ಯವಾಗಿಸುವುದಕ್ಕಿಂತ ಹೆಚ್ಚಾಗಿ, ನೊಂದ ಹೆಣ್ಣಿನ ಬಗ್ಗೆ ಲೇಖಕಿಯೇ ತಳೆದಿರುವ ಮಾತೃಹೃದಯದ ವಾತ್ಸಲ್ಯ ಭಾವವೇ ಮೇಲುಗೈ ಪಡೆಯುತ್ತದೆ. ಈ ಭಾವವು ವಿಧವೆ ತರುಣಿ ಸರಸವನ್ನು ಬಂಧುಗಳು, ಸುತ್ತಲಿನ ಸಮಾಜ ಶೋಷಿಸಿದ ಬಗೆಗಳನು ಚಿತ್ರಿಸುವಾಗ ನಿರೂಪಕಿಯೇ ಸೇರಿಸುವ ಟೀಕೆ, ಟಿಪ್ಪಣಿಗಳಗಳ ಮೂಲಕ ವ್ಯಕ್ತವಾಗುತ್ತದೆ. ಮೂರನೆಯ ಕೃತಿಯಾದ"ಪದರುಗಳು" ಪಾರ್ವತಮ್ಮನವರು ಬರೆದ ಸಣ್ಣ ಕತೆಗಳ ಸಂಕಲನವಾಗಿದೆ. 1979ರಲ್ಲಿ ಪ್ರಕಟವಾಗಿರುವ ಈ ಸಂಕಲನದಲ್ಲಿ ಎಂಟು ಕತೆಗಳಿವೆ. ಮನುಷ್ಯನ ಬದುಕು ಕಲ್ಲು ಬಂಡೆಯಲ್ಲ. ಬದುಕಿನ ಅವಧಿಯಲ್ಲಿ ಅನುಭವಗಳುಪದರ ಪದರಗಳಾಗಿ ಹಬ್ಬಿರುವುದರಸೂಕ್ಷ್ಮ ನೋಟವನ್ನು ಒದಗಿಸುವ ಯತ್ನ ಇಲ್ಲಿನ ಕತೆಗಳಲ್ಲಿವೆ. ನಿರಾಡಂಬರ ಸರಳಭಾಷೆ, ಕತೆಯ ಅಂತ್ಯದಲ್ಲ ಧಿಡೀರನೆ ಬೇರೊಂದು ತಿರುವುನೀಡಿ, ಇಡೀ ಕಥೆಯ ಅರ್ಥವನ್ನು ಬೇರೆಯಾಗಿ ಕಾಣಿಸುವ ಯತ್ನ ಇಲ್ಲಿ ಲೇಖಕಿ ಬಳಸುವ ಮುಖ್ಯ ತಂತ್ರವೆನ್ನಬಹುದು. ನಲಿವಿಗಿಂತಲೂ ಬದುಕಿನಲ್ಲಿ ಹೆಚ್ಚಾಗಿ ಹೆಣ್ಣಿಗೆ ಬಂದೊದಗುವ ದುರಂತ ದುರ್ವಿಧಿಗಳೇ ಈ ಕತೆಗಳಿಗೆ ವಸ್ತುಗಳಾಗಿವೆ ಆ ದುರಂತಗಳ ಮೂಲದಲ್ಲಿ ಸಮಾಜ ಹೆಣ್ಣಿಗೊಂದು/ ಗಂಡಿಗೊಂದು ನ್ಯಾಯವನ್ನು ರೂಢಿಸಿರುವ ಪಕ್ಷಪಾತ ನೀತಿಯ ಕಟುವಾದ ವಿಡಂಬನೆಯಿದೆ. ನೀತಿ ಬದಲಾಗಿ ಸಮಾನತೆ ನೆಲಸಲೆಂಬ ಪ್ರಗತಿಪರ ಆಶಯವಿದೆ. ಕವನ, ಕಾದಂಬರಿ ಮತ್ತು ಸಣ್ಣಕತೆಗಳ ಮೂರೂ ಪ್ರಕಾರಗಳಲ್ಲಿನ ಪಾರ್ವತಮ್ಮನವರ ಹರಡಿದ್ದರೂ, ಈ ಪ್ರಕಾರಗಳಿಗೇ ವಿಶಿಷ್ಟ ಬರಹವೆನಿಸಬಹುದಾದಂಥ ರೂಪ, ಶಿಲ್ಪ ತಾಂತ್ರಿಕ ಪ್ರಯೋಗಗಳಿಗಿಂತ ಹೆಚ್ಚಾಗಿ, ನೋವಿನ ಅನುಭವಗಳಿಗೆ ಮಿಡಿದ ಮೃದು ಮನದ ಭಾವಗಳ ಅಭಿವ್ಯಕ್ತಿಯ ಕಳಕಳಿ ಮುಖ್ಯವಾಗಿ ತೋರುತ್ತದೆ. ಈ ನೋವಿನ ಅನುಭವಗಳ ಹಿನ್ನಲೆಯಲ್ಲಿ ಪಿತೃಪ್ರಧಾನ ವ್ಯವಸ್ಥೆಯ ಸ್ವಾರ್ಥ, ಸ್ವಹಿತಾಸಕ್ತಿ, ಅಧಿಕಾರದಾಹ ಮತ್ತು ಶೋಷಕತೆಯ ಅಂಶಗಳಿರುವುದನ್ನು ದಾಖಲಿಸಿರುವುದು ಗಮನಾರ್ಹ. ●

**ಬಿ. ಎನ್. ಸುಮಿತ್ರಾಬಾಯಿ**

---

ನಮ್ಮ ಸಾಮಾಜಿಕ ಸಂಬಂಧಗಳು ಮತ್ತು ಕಾರ್ಯ ಚಟುವಟಿಕೆಗಳಿಂದ 'ಅತೀತವಾಗಿರುವ' ವಾಸ್ತವತೆಯಾಗಲಿ, ಶಕ್ತಿಯಾಗಲಿ ಇಲ್ಲ. ಇತಿಹಾಸ, ವೈಚಾರಿಕತೆ, ಪ್ರಗತಿ, ವಿಜ್ಞಾನ, ಲೋಕಾತೀತ ಶಾಶ್ವತಸತ್ಯ ಇವು ಯಾವುವೂ ನಮ್ಮನ್ನು ಪಕ್ಷಪಾತ ಮತ್ತು ಅಸಮಾನತೆಗಳಿಂದ ಪಾರುಮಾಡಲಾರವು. ನಮ್ಮ ಬದುಕುಗಳು, ಸಂಬಂಧಗಳು ಜಗತ್ತನ್ನು ಇನ್ನಷ್ಟು ವಿಕೇಂದ್ರಿತಗೊಳಿಸಲು ಯತ್ನಿಸುವವರಿಗೆ ಸೇರಿವೆ. ಅವರ ಉದ್ದೇಶಗಳು, ದರ್ಶನಗಳ ಬಗ್ಗೆ ಕೂಡ ಸಂದೇಹ ತಾಳುವ ಹಕ್ಕನ್ನು ನಾವೇ ಉಳಿಸಿಕೊಳ್ಳಬೇಕಾಗಿದೆ.

**–ಜೇನ್ ಫ್ಲಾಕ್ಸ್**

---

## ಕೃತಜ್ಞತೆ

ಬೆಂಗಳೂರಿನ ಮಧು ಪ್ರಿಂಟರ್ಸ್‌ನ ಶ್ರೀ ಬಿ. ವಿ. ಕೃಷ್ಣಮೂರ್ತಿಯವರು 'ಅಚಲ' ಪತ್ರಿಕೆಗೆ ದೇಣಿಗೆಯಾಗಿ 3500–00 ರೂಪಾಯಿಗಳನ್ನು ಕೊಟ್ಟು ಸಹಕರಿಸಿದ್ದಾರೆ. ಈ ಹಣದಿಂದ ರಾಜ್ಯದ ಇಪ್ಪತ್ತು ಮಹಿಳಾ ಕಾಲೇಜುಗಳಿಗೆ ಉಚಿತವಾಗಿ ಅಚಲ ಪತ್ರಿಕೆಯನ್ನು ಕಳುಹಿಸಲು ಕೋರಿದ್ದಾರೆ. ಶ್ರೀ ಕೃಷ್ಣಮೂರ್ತಿಯವರನ್ನು ಅಚಲ ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ. ಇಂತಹ ಹಿತೈಷಿಗಳ ಸಂಖ್ಯೆ ಹೆಚ್ಚಲಿ ಎಂದು ಅಚಲ ಹಾರೈಸುತ್ತದೆ.

# ಮಾನವತಾವಾದಿ ಮೇರಿ ಕ್ಯೂರಿ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಮತ್ತು ಸುಮಂಗಲಿ ಸೇವಾಶ್ರಮದ ಆಶ್ರಯದಲ್ಲಿ ಮಹಾನ್ ವಿಜ್ಞಾನಿ ಮೇರಿಕ್ಯೂರಿಯವರ 126ನೇ ಜನ್ಮದಿನೋತ್ಸವವನ್ನು ಸರಳ, ಸುಂದರ ಸಮಾರಂಭವೊಂದರಲ್ಲಿ ಅರ್ಥಪೂರ್ಣವಾಗಿ ಆಚರಿಸಲಾಯಿತು.

ಸಮಾರಂಭದ ಮುಖ್ಯ ಅತಿಥಿಯಾಗಿದ್ದ ಖ್ಯಾತ ಲೇಖಕಿ ನೇಮಿಚಂದ್ರ ಅವರು ಮಹಾನ್ ಮಾನವತಾವಾದಿ, ಅಪ್ರತಿಮ ವಿಜ್ಞಾನಿ ಮತ್ತು ನೊಬೆಲ್ ಪಾರಿತೋಷಕ ವಿಜೇತೆ ಮೆರಿಕ್ಯೂರಿ ಅವರ ನೆನಪು ನಿತ್ಯ ಸ್ಮರಣೀಯ ಎಂದು ಹೇಳಿ, ಆ ಮಹಾನ್ ವಿಜ್ಞಾನಿಯ ಜೀವನ ಚಿತ್ರವನ್ನು ಪುಟಾಣಿ ಮಕ್ಕಳಿಗೆ ಮತ್ತು ಆಶ್ರಮದ ಮಹಿಳೆಯರಿಗೆ ಹೃದಯಂಗಮವಾಗಿ ವಿವರಿಸಿದರು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ತನ್ನ ಹಿತೈಷಿಗಳ ನೆರವಿನಿಂದ ಸಂಗ್ರಹಿಸಿದ್ದ ಹತ್ತು ಮೈಕ್ರೋ-ಸ್ಕೋಪುಗಳನ್ನು ಈ ಸಂದರ್ಭದಲ್ಲಿ ಸುಮಂಗಲಿ ಸೇವಾಶ್ರಮದ ಶಾಲೆಗೆ ಕೊಡುಗೆಯಾಗಿ ನೀಡಿತು.

ಸಮಾರಂಭದ ಮತ್ತೊಬ್ಬ ಮುಖ್ಯ ಅತಿಥಿಯಾಗಿದ್ದ ಶ್ರೀಮತಿ ರಮಾಮಣಿಯವರು ಮೇರಿಕ್ಯೂರಿಯವರ ಬದುಕು ಎಲ್ಲ ಮಕ್ಕಳಿಗೂ ಆದರ್ಶವಾಗಬೇಕು, ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಶ್ರೀಮತಿ ಎಸ್. ಜಿ. ಸುಶೀಲಮ್ಮನವರು ಮೇರಿಕ್ಯೂರಿಯವರ ಬದುಕಿನ ಸಾಧನೆ ಮತ್ತು ತತ್ವ ಹೆಚ್ಚು ಜನಗಳಿಗೆ ಪ್ರಸಾರವಾಗಬೇಕು ಮತ್ತು ಮೇರಿಯ ಬದುಕಿನ ಒಳ್ಳೆಯ ಅಂಶಗಳನ್ನು ಎಲ್ಲರೂ ಜೀವನದಲ್ಲಿ ಅಳವಡಿಸಿಕೊಳ್ಳಬೇಕು, ಎಂದು ತಮ್ಮ ಅಧ್ಯಕ್ಷ ಭಾಷಣದಲ್ಲಿ ಕರೆಯಿತ್ತರು.

ಈ ಕಾರ್ಯಕ್ರಮದ ನಿರ್ವಹಣೆಯನ್ನು ಡಾ|| ಬಿ. ಎನ್. ಸುಮಿತ್ರಾಬಾಯಿಯವರು ನಡೆಸಿಕೊಟ್ಟರು ಮತ್ತು ಎನ್. ಗಾಯತ್ರಿದೇವಿಯವರು ವಂದನಾರ್ಪಣೆ ಮಾಡಿದರು.



ಶ್ರೀಮತಿ ನೇಮಿಚಂದ್ರರವರು ಮೈಕ್ರೋಸ್ಕೋಪ್‌ನ ಕಾರ್ಯವಿಧಾನವನ್ನು ಮಕ್ಕಳಿಗೆ ವಿವರಿಸಿ ತೋರಿಸುತ್ತಿದ್ದಾರೆ.



ನವೆಂಬರ್ 7, ಮೇರಿಕ್ಯೂರಿ ಜನ್ಮದಿನಾಚರಣೆಯಂದು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ಸುಮಂಗಲಿ ಸೇವಾಶ್ರಮದ ಶಾಲೆಗೆ ಹತ್ತು ಮೈಕ್ರೊಸ್ಕೋಪ್‌ಗಳನ್ನು ಕೊಡುಗೆಯಾಗಿ ನೀಡಿತು. ವಿಜ್ಞಾನದೆಡೆಗೆ ಆಸಕ್ತಿ ಮೂಡಿಸಲು ಮಕ್ಕಳಿಗಾಗಿಯೆ ಅನೇಕ ಬಗೆಯ ಉತ್ಕೃಷ್ಟ ಗುಣಮಟ್ಟದ 'ಶೈಕ್ಷಣಿಕ ಆಟಿಗೆಗಳನ್ನು' ತಯಾರಿಸುವ 'ಡೈನಮ್ ಇಂಜಿನಿಯರಿಂಗ್ ಕಾರ್ಪೊರೇಷನ್'ನ ಶ್ರೀ ಹರಿಪರಮೇಶ್ವರನ್ ಅವರು ಈ ಮೈಕ್ರೋಸ್ಕೋಪ್‌ಗಳನ್ನು ತಯಾರಿಸಿಕೊಟ್ಟರು. ಈ ಕೊಡುಗೆಯನ್ನು ನೀಡಲು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಸದಸ್ಯರೊಂದಿಗೆ ಶ್ರೀಮತಿ ಕೆ. ಎನ್. ಮಾಲತಿ ಶ್ರೀಮತಿಯರಾದ ಜಿ. ಶೈಲಜ, ಅನುರಾಧ ಅಗರ್‌ವಾಲ್, ವಿ. ವಿಜಯಲಕ್ಷ್ಮಿ, ಕೆ. ಟಿ. ಮೀರಾ, ಸುಮ, ಜಾನಕಮ್ಮ ಮುಂತಾದವರು ಸಹಕರಿಸಿದ್ದಾರೆ, ಅವರಿಗೆಲ್ಲಾ ಜಾಗೃತಿಯ ವಂದನೆಗಳು.

---

*Reg No MAG (5) PRC,DEGL 036/80/87*
**BOOK-POST/Periodicals**



**To,**

*If undelivered please return to :*
**Jagruthi Mahila Adhyayana Kendra**
**401, Vijay Tower, 2nd Main, RPC Layout**
**Vijayanagar, II Stage, Bangalore-40**
**Pin-560 040**